## ಸಂಚಿತ--ವಿಕಸಿತ

ಇದು

ನಿಮ್ಮ ಉಳಿತಾಯದ ಗಿಡ.
"ಕ್ಯುಮುಲೇಟಿವ್ ಡಿಪಾಸಿಟ್ ಯೋಜನೆ"
ಇದನ್ನು ನೀರೆರೆದು ಪೋಷಿಸಿ.
ನಾಳೆ ನಿಮ್ಮ ಬಾಳಿಗೆ ನೆರಳು ನೀಡುವ
ಮರವಾಗಿ ಬೆಳೆಯುತ್ತದೆ.

ಇದೊಂದು ಬಹುದ್ದೇಶ ಯೋಜನೆ.
12 ತಿಂಗಳಿನಿಂದ 120 ತಿಂಗಳವರೆಗೆ
ಪ್ರತಿ ತಿಂಗಳು ರೂ, 5, 10 ಅಥವಾ
ಇದರ ಗುಣಕಗಳಲ್ಲಿ ಕೊಡುತ್ತಾ ಬನ್ನಿ.
ಅವಧಿ ಮುಗಿದಾಗ ಒಂದು ದೊಡ್ಡ ಮೊತ್ತ
ನಿಮಗೆ ಸಿಗುತ್ತದೆ.

ಮುಂದೆ ಮಹತ್ವದ ಸಂದರ್ಭ ಒಂದರಲ್ಲಿ
ಒಂದು ದೊಡ್ಡ ಮೊತ್ತದ ಹಣ ಬೇಕಾದಾಗ
ಇಂದಿನ ನಿಮ್ಮ ಉಳಿತಾಯ ನೆರವಾಗಿ ಬರುತ್ತದೆ.

# ಸಿಂಡಿಕೇಟ್ ಬ್ಯಾಂಕ್

ಸಣ್ಣ ಉಳಿತಾಯ ಯೋಜನೆಗಳ ಶಿಲ್ಪಿ

# ಸಮುದಾಯ ವಾರ್ತಾಪತ್ರ

ಸಂಚಿಕೆ : 35 ಏಪ್ರಿಲ್ 1982

MAG (2) PR B. 143/79-80 KRNB. 372

COMPLIMENTARY COPY

ಸಂಪಾದಕ :

ಬರಗೂರು ರಾಮಚಂದ್ರಪ್ಪ

ಪ್ರಸಾರ ವ್ಯವಸ್ಥೆ :

ಎಲ್. ಬಿ. ಶೃಂಗೇಶ್ವರ

ಸಹಾಯ

ಗುಂಡಣ್ಣ

ವ್ಯವಹರಿಸುವ ವಿಳಾಸ :

46, ಅಂಗಡಿ ಬೀದಿ, ಬಸವನಗುಡಿ, ಬೆಂಗಳೂರು–560 004.

# ಈ ಸಂಚಿಕೆಯಲ್ಲಿ...



ಮುಖಚಿತ್ರ
ಪ್ರೊ|| ಎಸ್. ಕೆ. ರಾಮಚಂದ್ರರಾವ್


ಮುದ್ರಕರು-ಪ್ರಕಟಣೆ : ಹೆಚ್. ಜನಾರ್ಧನ, ಸಮುದಾಯ ಸಮನ್ವಯ ಸಮಿತಿ (ರಿ)
22/27, ಎಂ. ಜಿ. ಕೆ. ಮೂರ್ತಿ ಲೇಔಟ್, ಚಾಮರಾಜಪೇಟೆ, ಬೆಂಗಳೂರು–560 018
ಮುದ್ರಣ : ಕರ್ನಾಟಕ ಪ್ರೆಸ್‌ಮೆನ್ ಅಸೋಸಿಯೇಟ್ಸ್ [ಪ್ರೈ] ಲಿ., ಬೆಂಗಳೂರು–4.
ಸಂಪಾದಕ : ಬರಗೂರು ರಾಮಚಂದ್ರಪ್ಪ

MAG (2) PRB 143/79-80 KRNB-372

# ನಾಟಕೀಯವಾದ ಒಂದು ಕಾನೂನು

ಮೂಲ : ಅನಿತಾಕೌಲ್

ಅನು : ಲಕ್ಷ್ಮಿ

ಬೆಕೆಟ್‌ನ ಪಾತ್ರಗಳು 'ಗೋಡೋ'ಗೆ ಕಾದಂತೆಯೇ ಇತ್ತು, ಅವರುಗಳು ಕಾದಿದ್ದು, ಸುಮಾರು 15 ದಿನಗಳ ಹಿಂದಿನವರೆಗೂ ರಂಗಭೂಮಿಯ ಸಕ್ರಿಯ ಕಾರ್ಯಕರ್ತರೆಲ್ಲರೂ ದೆಹಲಿಯ ಲೆಫ್ಟಿನೆಂಟ್ ಗೌವರ್ನರ್ ಎಸ್. ಎಲ್. ಖುರಾನ ಅವರು ತಾವು ನೀಡಿದ ಆಶ್ವಾಸನೆಯನ್ನು ನಡೆಸಿ ಕೊಡುವರೆಂದು, ನಾಟಕ ಪ್ರದರ್ಶನಕ್ಕೆ ಸಂಬಂಧಪಟ್ಟ ಕಾನೂನಿನ ಎರಡು ಕ್ಲಿಷ್ಟ ಕಲಂಗಳನ್ನು ಕಿತ್ತು ಹಾಕುವ ರೆಂದು ಕಾದರು. 1876ರಲ್ಲಿ ಮೊದಲಿಗೆ ಘೋಷಿಸಲಾದ, 1981ನೇ ಸೆಪ್ಟೆಂಬರ್ ತಿಂಗಳಿನಲ್ಲಿ ಮತ್ತೊಮ್ಮೆ ಜಾರಿಗೆ ತರಲಾದ ಈ ಕಾನೂನಿನ ಪ್ರಕಾರ ಪ್ರತಿಯೊಂದು ನಾಟಕ ಪ್ರದರ್ಶನವೂ ಪೋಲೀಸರ ಅನುಮತಿಯೊಂದಿಗೇ ನಡೆಯಬೇಕು. ಕಳೆದ ತಿಂಗಳು ದೆಹಲಿಯ ರಂಗಭೂಮಿಯ ಕಲಾವಿದರೆಲ್ಲರೂ ಈ ಕಾನೂನಿಗೆ ತಮ್ಮ ಅತೀವ ವಿರೋಧವನ್ನು ವ್ಯಕ್ತಪಡಿಸಿ ಅದು ಜಾರಿಗೆ ಬರದಂತೆ ತಡೆಯಲು ಒಂದು ತಾತ್ಕಾಲಿಕ ಸಮಿತಿಯನ್ನು ರಚಿಸಿದರು. ಅವರನ್ನು ಸಮಾಧಾನಪಡಿಸಲು ಕಾನೂನಿನ ಆದೆರಡು ಕಲಂಗಳನ್ನು ರದ್ದುಪಡಿಸಿದ ಒಂದು ಪ್ರಕಟನೆಯನ್ನು ಸಧ್ಯ ದಲ್ಲೇ ಹೊರಡಿಸುವುದಾಗಿ ಖುರಾನ ಆಶ್ವಾಸನೆ ನೀಡಿದರು. ಆದರೆ ಆ ಪ್ರಕಟಣೆ 'ಗೋಡೋ'ನಂತೆ ಕೊನೆಗೂ ಬರಲೇ ಇಲ್ಲ.

ತೀವ್ರ ದೇಶಪ್ರೇಮದಿಂದ ತುಂಬಿದ್ದ 'ನೀಲ್ ದರ್ಪಣ್' ಎಂಬ ಬೆಂಗಾಲಿ ನಾಟಕ ಪ್ರದರ್ಶನದಿಂದ ಗಾಬರಿಗೊಂಡಿದ್ದ ವಸಾಹತುಶಾಹಿ ಬ್ರಿಟಿಷ್ ಸರ್ಕಾರವು 1876ರಲ್ಲಿ ಜಾರಿಗೆ ತಂದ ಈ ಕಾನೂನನ್ನು ರಂಗದ ಮೇಲೆ, ರಾಜಕೀಯ ಬಿನ್ನಾಭಿ ಪ್ರಾಯವನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯವನ್ನು ತುಳಿದು ಹಾಕುವ ಕರಾಳ ಕ್ರಮ ವನ್ನು ಅಂದಿನ ರಾಷ್ಟ್ರೀಯತಾವಾದಿಗಳು ಧಿಕ್ಕರಿಸಿದ್ದರು.

ಇದರದೇ ಹೊಸ ಅವತಾರವಾದ, 1980ರಲ್ಲಿ ಸಿದ್ಧಪಡಿಸಿ 81ನೇ ಸೆಪ್ಟೆಂಬರ್‌ನಿಂದ ಜಾರಿಯಲ್ಲಿರುವ, ಜನರಂಜನಾ ಕಾರ್ಯಕ್ರಮಗಳ ಅನುಮತಿ ಮತ್ತು ನಿಯಂತ್ರಣ ಕಾನೂನು ಎರಡು ಹೊಸ ಕಲಂಗಳನ್ನು ಹೊಂದಿದ್ದು, ಮೂಲ

ಕಾನೂನಿಗಿಂತಲೂ ಕರಾಳವಾಗಿದೆ. ನಿರ್ದಿಷ್ಟ ಅರ್ಥವಿಲ್ಲದ ಈ ಎರಡು ಕಲಂಗಳನ್ನು ಅನುಮತಿದಾರರಿಗೆ ಯಾವುದೇ ನಾಟಕ ಅಥವ ಪ್ರದರ್ಶನವನ್ನು ಪೂರ್ತಿಯಾಗಿ ನಿಷೇಧಿಸುವ ಅಧಿಕಾರವನ್ನು ನೀಡುತ್ತದೆ.

9ನೇ ಕಲಂ, ಪ್ರದರ್ಶನದ ಲೈಸನ್ಸನ್ನು ಕುರಿತಿದ್ದು. ಇದರ ಪ್ರಕಾರ ಶಾಂತಿ ಭಂಗಕ್ಕೆ ಕಾರಣವಾಗಬಹುದೆಂದು ಶಂಕಿಸಲಾದ ರಾಷ್ಟ್ರೀಯ, ಧಾರ್ಮಿಕ ಹಾಗೂ ಜಾತೀಯ ಭಾವನೆಗಳಿಗೆ ಧಕ್ಕೆ ತರುವ, ವರ್ಗ ದ್ವೇಷವನ್ನು ಪ್ರಚೋದಿಸುವ, ಸರ್ಕಾರದ ವಿರುದ್ಧ ಜನರನ್ನು ಎತ್ತಿಕಟ್ಟುವ ಉದ್ದೇಶವುಳ್ಳ, ವ್ಯಕ್ತಿಗಳ ಬಗೆ ಅವಮಾನಕರ ಉಲ್ಲೇಖವುಳ್ಳ ಪ್ರದರ್ಶನಗಳನ್ನು ಸಂಪೂರ್ಣವಾಗಿ ನಿಷೇಧಿಸಬಹುದು

10ನೇ ಕಲಂ, ಪ್ರದರ್ಶನ ಸೂಕ್ತತೆ ಕುರಿತಿದ್ದು. ಇದರ ಪ್ರಕಾರ ಹಿಂಸಾತ್ಮಕ ಕೃತ್ಯಗಳನ್ನು ಪ್ರಚೋದಿಸುವ ಆಡಳಿತದಲ್ಲಿರುವ ಸರ್ಕಾರವನ್ನು ಉರುಳಿಸುವ ಉದ್ದೇಶವುಳ್ಳ ಪೋಲಿಸರು, ಸೈನಿಕರನ್ನು ಅಶಿಸ್ತು ಅವಿಧೇಯತನಕ್ಕೆ ಎಳೆಯುವ ಮತೀಯ ಗಲಭೆಗಳಿಗೆ ಎಡೆಕೊಡುವ, ಅತೀ ಅಸಭ್ಯ ಅಶ್ಲೀಲವಾದ ಪ್ರದರ್ಶನಗಳನ್ನು ನಿಷೇಧಿಸುವ ಹಕ್ಕು ಪೋಲೀಸರಿಗಿದೆ. ಇದೆಲ್ಲವನ್ನು ಮೀರಿದ ಕೊನೆಯ ಅಂಶ ಇನ್ನೊಂದಿದೆ. ಮೇಲೆ ಹೇಳಿದ ಕಾರಣಗಳಲ್ಲದೆ ಮತ್ಯಾವುದಾದರೂ ರೀತಿಯಿಂದ ಪ್ರದರ್ಶನವು ಆಕ್ಷೇಪಣೀಯವಾಗಿದ್ದರೆ ಅನುಮತಿಯನ್ನು ನಿರಾಕರಿಸುವ ಶಕ್ತಿಯನ್ನು ಪೋಲೀಸರಿಗೆ ನೀಡುತ್ತದೆ. ಈ ಸೂಕ್ತತಾ ಪತ್ರವನ್ನು ನೀಡುವ ಸಮಿತಿಯು ಪ್ರದರ್ಶನ ಕಲೆಗಳಲ್ಲಿ ಖ್ಯಾತರಾಗಿರುವ ಹಲವರನ್ನು ಸದಸ್ಯರನ್ನಾಗಿ ಹೊಂದಿರುವುದು. ಆದರೆ ಈ ಸಮಿತಿಯ ರಚನೆಯೇ ಇನ್ನೂ ನಡೆದಿಲ್ಲ.

ಸಧ್ಯಕ್ಕೆ ಈ ಕಾನೂನು ಬರೀ ಔಪಚಾರಿಕವೆನಿಸಿದರೂ ಅದರಿಂದ ಪೋಲೀಸರ ಹಕ್ಕಿಗೇನೂ ಚ್ಯುತಿ ಬರುವುದಿಲ್ಲ. ಇದರಿಂದ ರೋಷಗೊಂಡ ಕಲಾವಿದನೊಬ್ಬನ ಮಾತಿನಲ್ಲಿ ಹೇಳುವುದಾದರೆ "ನ್ಯಾಯ ಸ್ಥಾನದಲ್ಲಿ ಈ ಕಾನೂನು ಮೂಲಭೂತ ಹಕ್ಕುಗಳಲ್ಲೊಂದಾದ ವಾಕ್ ಸ್ವಾತಂತ್ರ್ಯವನ್ನೇ ವಿರೋಧಿಸಬಲ್ಲದು". (Freedom of expression)

ಮತೀಯ ಗಲಭೆಗಳನ್ನು ತಡೆಯುವುದು, ಶಾಂತಿಪಾಲನೆ, ವ್ಯಕ್ತಿಗಳಿಗಾಗುವ ಅವಮಾನಕರ ಉಲ್ಲೇಖಗಳು ಅಥವಾ ಅಶ್ಲೀಲತೆಗಳನ್ನು ತಡೆಯುವ ನೆಪವೊಂದನ್ನು ಬಿಟ್ಟರೆ (ಅದರಲ್ಲೂ ಮಾನನಷ್ಟ ಹಾಗೂ ಅಶ್ಲೀಲತೆಗಳನ್ನು ವಿರೋಧಿಸುವ ಕಾನೂನುಗಳು ಬೇರೆಯೇ ಇರುವಾಗ) ಈ ಕಾನೂನಿಗೆ ರಾಜಕೀಯ ಹಿನ್ನಲೆ ಸ್ಪಷ್ಟವೂ ಮತ್ತು ವಾದಾರ್ಹವೂ ಆಗಿದೆ.

ಅನೇಕ ರಂಗಭೂಮಿಯ ಕಲಾವಿದರ ಅಭಿಪ್ರಾಯದಲ್ಲಿ ರಾಜಧಾನಿಯಲ್ಲಿ ನೆಜಪ್ರಿಯವಾಗುತ್ತಿರುವ ಮತ್ತು ವಿಸ್ತಾರಗೊಳ್ಳುತ್ತಿರುವ, ಆಡಳಿತ ವಿರೋಧಿ,

ಯಂಥಾ ಸ್ಥಿತಿಯನ್ನು ಖಂಡಿಸುವ ಬೀದಿ ನಾಟಕಗಳೇ ಈ ಕಾನೂನಿಗೆ ಕಾರಣ. ಕಳೆದ ಕೆಲವು ವರ್ಷಗಳಲ್ಲಿ ಜನನಾಟ್ಯ ಮಂಚ್, ಪ್ರಯೋಗ್, ಮಹಿಳಾ ದಕ್ಷತಾ ಸಮಿತಿ ಮುಂತಾದ ಇನ್ನೂ ಅನೇಕ ಸಕ್ರಿಯ ನಾಟಕ ತಂಡಗಳು ಬೀದಿ, ಕಾಲೇಜು, ಪಾರ್ಕು, ಸುತ್ತಮುತ್ತಲ ಹಳ್ಳಿಗಳಲ್ಲಿ, ಹರಿಜನರ ಶೋಷಣೆ, ಜೀತಪದ್ಧತಿ, ಪೋಲೀಸರ ಅಮಾನುಷತೆ, ವರದಕ್ಷಿಣೆಯ ಬೆಂಕಿಯಲ್ಲಿ ಬೆಂದ ಹೆಣ್ಣುಗಳ ಕಥೆಗಳನ್ನು ನಾಟಕ ರೂಪದಲ್ಲಿ ಪ್ರದರ್ಶಿಸುತ್ತಿದ್ದಾರೆ. ಜನರ ಮನಸ್ಸಿನ ಮೇಲೆ ಆಳವಾದ ಪ್ರಭಾವ ಬೀರುವ ಈ ಪ್ರದರ್ಶನಗಳನ್ನು ನಿಯಂತ್ರಿಸುವುದು ಕಷ್ಟದ ಕೆಲಸ.

ಈವರೆಗೂ ಒಮ್ಮೆಯೂ ಪ್ರದರ್ಶನಗಳು ಹಿಂಸೆಗಾಗಲೀ, ಮತೀಯ ಗಲಭೆಗಾಗಲೀ ಕಾರಣವಾಗಿಲ್ಲ. (ಹಾಗೆ ನೋಡಿದರೆ, ಇಂತಹ ಗಲಭೆಗಳನ್ನು ತಡೆಯುವುದೇ ಅವುಗಳ ಉದ್ದೇಶ). ಆದರೆ ಅಧಿಕಾರಿ ವರ್ಗದ ಉದಾಸೀನತೆ, ಪೋಲೀಸರ ಕ್ರೌರ್ಯದ ಸತ್ಯ ಚಿತ್ರವನ್ನು ಇವು ನೀಡುತ್ತವೆ. ಆದ್ದರಿಂದ ಈ ಕಾನೂನಿನಿಂದ ಹೆಚ್ಚು ತೊಂದರೆಯಾಗಲಿರುವುದು ಬೀದಿ ನಾಟಕಕ್ಕೇ ಎಂಬುದಂತೂ ಖಚಿತ.

ಡೆಪ್ಯುಟಿ ಪೋಲೀಸ್ ಕಮೀಷನರ್ (ಲೆಸೆನ್ಸಿಂಗ್) ರಾಜನ್ ಮಿಶ್ರಾರ ಪ್ರಕಾರ ಈ ಕಾನೂನಿಗೆ ಯಾವ ರಾಜಕೀಯ ಹಿನ್ನೆಲೆಯೂ ಇಲ್ಲ. "ನಾವು ಯಾರ ವಿರುದ್ಧವೂ ಕೊಡಲಿ ಮಸೆಯುತ್ತಿಲ್ಲ. ಈ ಕಾನೂನನ್ನು ಜಾರಿಗೆ ತರುವುದರಲ್ಲಿ ಯಾವ ರಾಜಕೀಯ ಉದ್ದೇಶವೂ ಅಡಗಿಲ್ಲ. ಪರಿಸ್ಥಿತಿಯನ್ನು ಹತೋಟಿಯಲ್ಲಿಡುವ ನಮ್ಮ ಪ್ರಯತ್ನವನ್ನು ಮಾತ್ರ ಮಾಡುತ್ತಿದ್ದೇವೆ ನಾವು." ಮನರಂಜನಾ ತೆರಿಗೆ ಕಮೀಷನರ ಕೆಲಸದಲ್ಲಿ ನೆರವಾಗುವುದೂ ಈ ಕಾನೂನಿನ ಉದ್ದೇಶ ಎಂದೂ ಮಿಶ್ರಾರ ಹೇಳಿಕೆ. "ಅನೇಕ ಪ್ರದರ್ಶನಕಾರರು ತೆರಿಗೆ ಪತ್ರವನ್ನು ಪಡೆಯುವುದೇ ಇಲ್ಲವೆಂದು ಕಮೀಷನರಿಂದ ನಮಗೆ ಆಗಾಗ ದೂರುಗಳು ಬರುತ್ತಲೇ ಇರುತ್ತವೆ. ಇಂತಹ ಅಕ್ರಮ ಪ್ರದರ್ಶನಗಳನ್ನು ನಿಲ್ಲಿಸಲು ಅವರು ನಮ್ಮ ನೆರವು ಕೇಳಿದ್ದಾರು".

ದೆಹಲಿಯ ಎಲ್ಲ ನಾಟಕ ತಂಡಗಳಿಂದ ಸದಸ್ಯರನ್ನು ಹೊಂದಿದ್ದ – ಎಂ. ಕೆ. ರೈನಾ, ಬನ್ಸಿಕೌಲ್, ರತನ್‌ದಾಸ್, ನರೇಂದ್ರ ಶರ್ಮ, ರಾಮಗೋಪಾಲ್ ಬಜಾಜ್ ಮತ್ತು ರತಿ ಬಾರ್ತಲೋಮಿಯೋ ಇವರುಗಳನ್ನೊಳಗೊಂಡ ಈ ಸಮಿತಿಯು ಕಳೆದ ತಿಂಗಳು ದೆಹಲಿಯ ಲೆಫ್ಟಿನೆಂಟ್ ಗವರ್ನರ್, ಎಸ್. ಎಲ್. ಖುರಾನಾ ಅವರ ಮನೆಗೆ ಮುತ್ತಿಗೆ ಹಾಕಿ ಈ ಕಾನೂನನ್ನು ರದ್ದುಗೊಳಿಸುವಂತೆ ಆಗ್ರಹಪಡಿಸಿತು. ಅವರಿಗೆ ತೋರಿಕೆಯ ಸಹಕಾರವೂ ದೊರೆಯಿತು. ಪೋಲೀಸರಿಗೆ ಇಷ್ಟೊಂದು ಅಧಿಕಾರ ನೀಡುವುದರಲ್ಲಿ ಖುರಾನಾ ಅವರಿಗೆ ಅತಿ ಉತ್ಸಾಹ ವಿದ್ದಂತೇನೂ ತೋರಲಿಲ್ಲ. ಆದರೆ ಇದೆಲ್ಲದರ ಪರಿಣಾಮ ಮಾತ್ರ ನಿರಾಶಾ

ದಾಯಕವಾಗಿತ್ತು. ಸೂಕ್ತತೆಯ ಬಗೆಗಿದ್ದ ಕಲಂಅನ್ನು ಸದ್ಯಕ್ಕೆ ತಡೆ ಹಿಡಿಯ ಲಾಯಿತು. ನಾಟಕ ತಂಡಗಳು ತಮ್ಮ ಪ್ರದರ್ಶನಕ್ಕೆ ಅನುಮತಿ ಪಡೆಯಲು ಖಾಕಿಧಾರಿ ಅಧಿಕಾರಿಗಳ ಕಛೇರಿಗೆ ಧಾವಿಸಿದವು.

"ಒಂದೆಡೆಯಿಂದ ಸರ್ಕಾರವು ನಾಟಕವನ್ನು ಪ್ರೋತ್ಸಾಹಿಸುವ ಪ್ರಯತ್ನ ಮಾಡುತ್ತಿದೆ. ಮತ್ತೊಂದೆಡೆಯಿಂದ ಅದರ ಸದ್ದಡಗಿಸುವ ಪ್ರಯತ್ನವೂ ನಡೆದಿದೆ. ನಾವು ವಿರೋಧಿಸುತ್ತಿರುವುದು ಕಾನೂನಿನ ಒಂದೆರಡು ಕಲಂಗಳನ್ನು ಮಾತ್ರ ಅಲ್ಲ. ಇಡೀ ಕಾನೂನನ್ನೇ ಬುಡ ಸಹಿತ ಕಿತ್ತೆಸೆಯಬೇಕು" ಎನ್ನುತ್ತಾರೆ ಖ್ಯಾತ ನಟ, ನಿರ್ದೇಶಕ ರಾಮಗೋಪಾಲ ಬಜಾಜ್.

ದೆಹಲಿಯ ನಾಟಕ ತಂಡಗಳ ಕುತ್ತಿಗೆಯ ಮೇಲೆ ಸೆನ್ಸಾರ್‌ನ ಕತ್ತಿ ಆಡುತ್ತಿರುವಂತೆಯೇ, ಇದನ್ನೇ ಅನುಸರಿಸಿ ಇತರ ನಗರಗಳ ಪೋಲೀಸ್ ಅಧಿಕಾರಿಗಳೂ ರಂಗಭೂಮಿಯ ಸೊಲ್ಲಡಗಿಸಲು ಸಿದ್ಧರಾಗುವುದರಲ್ಲಿ ತಡಮಾಡಲಾರರು. ವಿಶೇಷ ವಾಗಿ ಇದರಿಂದ ತೊಂದರೆಯಾಗಲಿರುವುದು ಕರ್ನಾಟಕ ಮುಂತಾದ ರಾಜ್ಯಗಳಲ್ಲಿ ಬಹಳ ದಿನಗಳಿಂದಲೂ ರಾಜಕೀಯ ವಸ್ತುಗಳನ್ನುಳ್ಳ ಬೀದಿ ನಾಟಕಗಳನ್ನು ಪ್ರದರ್ಶಿಸುತ್ತಿರುವ ನಾಟಕ ತಂಡಗಳಿಗೆ. "ರಂಗಭೂಮಿಯೂ ವರ್ತಮಾನ ಪತ್ರಿಕೆಯಂತೆಯೇ ಸುದ್ದಿ ಪ್ರಸರಣದ ಒಂದು ವಿಧಾನ. ಇಂದು ರಂಗಭೂಮಿಯ ಮೇಲೆ ನಡೆದಿರುವ ಧಾಳಿಯನ್ನು ನಾವು ವಿರೋಧಿಸದಿದ್ದರೆ, ಅಧಿಕಾರ ವರ್ಗವು ನಮ್ಮನ್ನು ಮತ್ತೂ ದೋಚಲು ಪ್ರೋತ್ಸಾಹಿಸಿದಂತೆ" ಎನ್ನುತ್ತಾರೆ ದೆಹಲಿಯ ರಂಗಭೂಮಿಯ ಕಾರ್ಯಕರ್ತರೊಬ್ಬರು. ಪರಿಸ್ಥಿತಿ ಬದಲಾಗುವ ಸೂಚನೆಯೇನು ಕಾಣಬರದಿರುವುದರಿಂದ ನ್ಯಾಯಾಂಗದ ಮಧ್ಯಸ್ಥಿಕೆಯಿಂದ ಮಾತ್ರವೇ ವಿವಾದ ವನ್ನು ಬಗೆಹರಿಸಲು ಸಾಧ್ಯ.

(ಕೃಪೆ : ಇಂಡಿಯಾ ಟುಡೆ)

# ಲಂಬಾಣಿ; ವಿಚಾರ ವೇದಿಕೆ

—ಬಿನಕನಹಳ್ಳಿ ಜಿ. ನಾಯಕ್

---

( ಕಳೆದ ಸಂಚಿಕೆಯಿಂದ )

ಮೂಡಣ ದಿಕ್ಕಿನಲ್ಲಿ 'ಪಂಜುರಲಿ ಭೂತ'ದ ಹಾಗೆ ದಿನಕರ ಉರಿಯುತ್ತಾ ಬಂದ. ಅಂದು ಫೆಬ್ರವರಿ ಹದಿನಾಲ್ಕು. ನನ್ನ ಬಾಂಧವರ ಅನ್ವೇಷಣೆಯಲ್ಲಿ ತೊಡಗಿದೆ. ಶಿವಮೊಗ್ಗ ನನಗೇನು ಹೊಸತಲ್ಲ. ಅಲ್ಲಿಯ ವಕ್ರತೆಯ ಬಗ್ಗೆ, ನನ್ನ ಮೆದುಳಿಗೆ ಎಟಕುವಷ್ಟರ ಮಟ್ಟಿಗೆ ತಿಳಿದುಕೊಂಡಿದ್ದೇನೆ.

ಒಬ್ಬ ಪರಿಚಿತ ವ್ಯಕ್ತಿ;

'ಯಾವಾಗ್ ಬಂದ್ರಿ........ಏನು......ಎಂತು.'— ಎನ್ನುತ್ತಿದ್ದಂತೆಯೇ ಗರಿ–ಗರಿಯ ಖಾದಿ, ಜುಬ್ಬ, ಪೈಜಾಮ ತೊಟ್ಟು, ಶ್ಯಾಲನ್ನು ಹೊದೆದು ಭರತಪ್ಪನ ಹಾಗೆ ನಗುತ್ತಾ ನಿಂತ, ಆ ವ್ಯಕ್ತಿಯ ಪರಿಚಯವಾಯ್ತು. ಅವರನ್ನು ನಾನು, ಮೊದಲಿನಿಂದಲೂ ಬಲ್ಲೆನಾದರೂ, ಖುದ್ದಾಗಿ ಪರಿಚಯವಾಗಿರಲಿಲ್ಲ. ಅಂತೂ ಈ ವಿಚಾರವೇದಿಕೆಗೆ ರಾಜಕೀಯ ಕಳೆ ಇದೆ ಎಂದುಕೊಂಡು. ಬಿಳಿ–ಬಿಳಿಯಾಗಿ ನಕ್ಕು ಸುಮ್ಮನಾದೆ.

ಈ ವಿಚಾರವೇದಿಕೆ (!?) ನಡೆಯುದ ಹಾಗೆ ನೋಡಿಕೊಳ್ಳಬೇಕೆಂದು ಹವಣಿಸಿದ ಪ್ರಜ್ಞಾವಂತ ಲಂಬಾಣಿಗರ ಬಗ್ಗೆ ಸ್ನೇಹಿತರೇ ಮಾತಾಡಿದರು. ಯುವಕರಿಗೆ ಯಾವರೀತಿಯಲ್ಲೂ ಈ ತಿಳಿದಂತ ಹಿರಿಯರು ಪ್ರೋತ್ಸಾಹಕೊಡುವು ದಿಲ್ಲ. ನಮ್ಮ ಸಮಾಜದ ಏಳಿಗೆ ಎಂತು. ಸಂಘಟನೆ ಹೇಗೆ ?" ಎಂದು ಮುಂತಾಗಿ ಕಳ–ಕಳಿಯಿಂದ ಮಾತಾಡಿ ಕಾಫಿ ಹೀರಿದರಷ್ಟೆ.

ಇಲ್ಲಿ ಒಂದು ಮಾತನ್ನು ಅಗತ್ಯವಾಗಿ ಹೇಳಬೇಕಾಗಿದೆ. ವಿಚಾರವೇದಿಕೆಗೆ ರಾಜಕೀಯ ಬಣ್ಣ ಕೊಡ ಬಯಸಿ, ಮುಗ್ಧ ಲಂಬಾಣಿಗರ ಓಟನ್ನು ಪಡೆಯಲು ಕಚ್ಚಾಡಿ. ಸ್ಟೆತಸ್ಕೋಪನ್ನು ಕೊರಳಲ್ಲಿ ತೂಗು ಹಾಕಿಕೊಂಡು ಮೂಗಿಗೆ ಬಟ್ಟೆ ಕಟ್ಟಿಕೊಂಡು 'ಆಪರೇಷನ್ ಥಿಯೇಟರ್' ಕಡೆ ಹೆಜ್ಜೆ ಹಾಕುವ ಒಬ್ಬ ವೈದ್ಯ, ಕೆಲವು ವರ್ಷಗಳ ಹಿಂದೆ ಕೆಲಸಕ್ಕೆ ರಾಜಿನಾಮೆ ಇತ್ತು. ಎಲಕ್ಷನ್ನಿಗೆ ನಿಂತು, ಕಲೆಕ್ಷನ್ ಆಗದೆ, ಸೋತು, ಮತ್ತೆ ಹವಣಿಸುತ್ತಿರುವ ಈತನಿಗೆ ಬುದ್ಧಿಬಂದಿಲ್ಲವೆಂದು ತೋರುತ್ತದೆ. ಅಧಿಕಾರದಲ್ಲಿದ್ದಾಗ ಆಸ್ಪತ್ರೆಗೆ ಹೋಗುವ ಬಡಲಂಬಾಣಿಗರನ್ನು

ಅವಮಾನಗೊಳಿಸಿ ಛೇಡಿಸಿ ಕಳುಹಿಸುತ್ತಿದ್ದ ಈತನಿಗೆ ಸರಿಯಾದ ರೀತಿಯಲ್ಲಿ ಪಾಠ ಕಲಿಸಿದರೂ ಮತ್ತೆ ತಲೆ ತುರುಕಿಸಲು ಪ್ರಯತ್ನಿಸುತ್ತಿರುವುದು ಸೋಜಿಗದ ಸಂಗತಿ.

ಹತ್ತುವರೆಯಾದರೂ ಜನರ ಸುಳಿವಿಲ್ಲ. ವಿಚಾರವಂತರ ಹಣಾಹಣಿಯಿಲ್ಲ. ವೇದಿಕೆಗೆ ಬರುವ ಕೆಲವರಿಗೆ, ಬರಕೂಡದೆಂದೂ, ಈ ವೇದಿಕೆಯ ಹಿಂದಿನ ಗುಟ್ಟನ್ನು ತಿಳಿಸಿ ತಂತಿಕೊಟ್ಟಿದ್ದರಂತೆ. ಕೊನೆಗೂ ಕೆಲವರು ಬರಲಿಲ್ಲ.

ಹಿರಿಯರು ಕೆಲವರು ಈ ಕುರಿತು ಚಿಂತನೆಗೆ ತೊಡಗಿದ್ದರೆಂದು ತೋರುತ್ತದೆ. ಅವರೆಲ್ಲರ ಮುಖಗಳ ಮೇಲೆ ಅಸಮಾಧಾನದ ಕಾರ್ಮೋಡ ಕವಿದಂತೆ ತೋರಿತು.

ಸಮಾಜದ ಕಳ-ಕಳಿಯ ಬಗ್ಗೆ ಮಾತಾಡುತ್ತಿದ್ದರೂ, ರಾಜಕೀಯದ ಇನ್ನೊಂದು ರೂಪ, ಅವರ ಬಾಯಿಂದ ಸ್ಪಷ್ಟವಾಗಿ ಹೊರಹೊಮ್ಮುತ್ತಿತ್ತು.

ಸೂರ್ಯ, ಶಿವಮೊಗ್ಗೆಯ ಬೀದಿಗಳಲ್ಲಿ ಬಯಲಾಗುತ್ತಿದ್ದ. ಎಲ್ಲರೂ ಶೃಂಗಾರಗೊಂಡ ಬ್ಯಾಡ್ಜ್ ಧರಿಸಿ ವೇದಿಕೆಯ ಕಡೆ ಮೆರವಣಿಗೆಯಲ್ಲಿ ಹೊರಟೆವು. ಡಿ. ಸಿ. ಸಿ. ಬ್ಯಾಂಕ್ ಸಭಾಂಗಣದಲ್ಲಿ ವೇದಿಕೆಯ ವ್ಯವಸ್ಥೆಯಾಗಿತ್ತು.

ಹನ್ನೊಂದರ ನಂತರ ಲಂಬಾಣಿ ಪ್ರವಾಹವೇ ಹರಿದು ಬಂದಿತು. ಅವರೆಲ್ಲಾ ಒಂದಲ್ಲ ಒಂದು ಬೇನೆಯಿಂದ ನರಳುತ್ತಿರುವಂತೆ ತೋರಿತು. ಹಿಂದಿನಂತೆ ಅವರ ತಲೆಗಳ ಮೇಲೆ ಬಣ್ಣ-ಬಣ್ಣದ ಪಗಡಿಗಳಿಲ್ಲ, ಮುಖಗಳಲ್ಲಿ ಕಳೆಯಿಲ್ಲ.

ಸಭಾಂಗಣ ಕಿಕ್ಕಿರಿದು ತುಂಬಿತು. ಹಿರಿಯರಿಗೆ ಸಂತೋಷವಾಗಿರಬೇಕು. ಮುಖ್ಯ ಅತಿಥಿಗಳ ಸಾಲು ಆಸನಗಳಲ್ಲಿ ಮೈಚಾಚಿತು. ನಾನು, ಹಿಂದೆ ಕೂತು ಒಬ್ಬ ವೈದ್ಯನ ಹತ್ತಿರ ಮಾತಾಡುತ್ತಿದ್ದೆ, ಕೆಲವು ದಿನಗಳ ಹಿಂದೆ 'ಕನ್ನಡ ಪ್ರಭ' ಪತ್ರಿಕೆಯಲ್ಲಿ (ವಾ. ವಿ.) 'ಲಂಬಾಣಿ ವೃತ್ತಿಗಾಯಕನ ನಶಿಸುತ್ತಿರುವ ಜಾನಪದಕಲೆ' ಲೇಖನ ಬರೆದಿದ್ದೆ. ಆ ಲೇಖನದಲ್ಲಿ ವೃತ್ತಿಗಾಯಕನ ಬಗ್ಗೆ ಬರೆಯುತ್ತಾ, ಲಂಬಾಣಿಗರು ತಮ್ಮ ಕುಲದ ವೃತ್ತಿ ಗಾಯಕನಾದ ಢಾಡಿಯನ್ನು ಅಸ್ಪೃಶ್ಯನಂತೆ ನಡೆಸಿಕೊಂಡು ಬಂದಿದ್ದಾರೆ. ಈ ಕ್ರೂರ ವ್ಯವಸ್ಥೆಯನ್ನು ಕಂಡ ಪ್ರತಿಯೊಬ್ಬ ಪ್ರಜ್ಞಾವಂತ ಲಂಬಾಣಿಯೂ ಇಂದು 'ಅಗತ್ಯವಾಗಿ ಪ್ರತಿಭಟಿಸಬೇಕಾಗಿದೆ'- ಎಂದು ಸೂಚಿಸಿದ್ದೆ. ಕೆಲ ಮಿತ್ರರಿಗೆ ಈ ಮಾತು ರುಚಿಸಲಿಲ್ಲವೆಂದು ತೋರುತ್ತದೆ. 'ಢಾಡಿ ಲಂಬಾಣಿ ಹೇಗಾಗುತ್ತಾನೆ ಅವನು ಅಸ್ಪೃಶ್ಯನೇ....'- ಅವರ ಧಾಟಿ. ಸಮರ್ಪಕವಾಗಿ ವಿವರಿಸಿದರೂ, ಅವರ ಮಾತುಗಳು ಮಾತ್ರ ಉಡದ ಪಟ್ಟು. ಇವರೆಲ್ಲಾ ಪ್ರಜ್ಞಾವಂತರೇ !

ಪ್ರಾರ್ಥನೆ, ಕುಲದೇವರಾದ 'ಸೇವಭಾಯ'ನ ಬಗ್ಗೆ ಸಿನಿಮಾದ ಧಾಟಿಯಲ್ಲಿ ದಪ್ಪ-ದಪ್ಪನೆಯ ಹೂವಿನ ಮಾಲೆಗಳು ಮುಖ್ಯ ಅತಿಥಿಗಳ ಕೊರಳಲ್ಲಿ ತೂಕಡಿಸಿ

ದವು. ವೇದಿಕೆಯ ಮೇಲೆ ಕೂತ ಪ್ರತಿಯೊಬ್ಬರೂ ನನಗೆ ಗೊತ್ತು. ಅವರೆಲ್ಲಾ ನನ ಜನರ ಬಗ್ಗೆ ಕಳ-ಕಳಿ ಹೊಂದಿದವರು, ಉಬ್ಬಿದ ಗಲ್ಲದವರು, ಕೆಂಪು ಹೊಟ್ಟೆಯವರು.

ಹಿರಿಯರಾದ ಇಂಜನಿಯರ್ ಓರ್ವರು ಉದ್ಘಾಟನೆ ಮಾಡುತ್ತಾ, 'ನಮ್ಮ ಜನ ಎಲ್ಲಿಲ್ಲ ? ಕನ್ಯಕುಮಾರಿಯಿಂದ, ಹಿಡಿದು ಕಾಶ್ಮೀರದವರೆಗೆ ಇದ್ದಾರೆ. ನಾನು ಈ ಭಾರತ ವ್ಯಾಪಿನಲ್ಲಿ ಕಾಲಾಡಿಸಿ ಬಂದಿದ್ದೇನೆ. ಆದರೆ ಈ ಕರ್ನಾಟಕದಲ್ಲಿ ಮುಂದುವರಿದಂತೆ, ನಮ್ಮ ಕುಲ ಬಾಂಧವರು ಎಲ್ಲಿಯೂ ಮುಂದು ಬಂದಿಲ್ಲ, ಈಜನ ತುಂಬಾ........ಬಡವರು, ನನ್ನ ತಂದೆ - ಬಾಂಧವರ ಪರವಾಗಿ ನನ್ನ ಸಮಾಜಕ್ಕೆ ನಮಸ್ಕಾರಗಳು.

ಈ ಹಿರಿಯ, ಈ ಜನ ಹಿಂದುಳಿಯಲು ಕಾರಣ ಯಾರು ? ಸಾಮಾಜಿಕ ಏರು-ಪೇರಿಗೆ ಏನು ಕಾರಣ ? ಸಂಘಟನೆ ಯಾವ ದೃಷ್ಟಿಯಿಂದ?– ಏನೂ ಹೇಳದೆ ಮಾತು ಮುಗಿಸಿದ್ದರು.

ಲಂಬಾಣಿಗರ ಶೋಷಣೆಗೆ ಈ ಮುಂದುವರಿದ ಶಿಷ್ಯರೇ ಕಾರಣ ಎಂದೆನಿಸಿತು. ಏಕೆಂದರೆ ಉದ್ಘಾಟಿಸಿದ ವ್ಯಕ್ತಿಯ ಇಕ್ಕಳದಂತಹ ಕೈಯಲ್ಲಿ ನನ್ನ ಜನ ನರಳಿದ್ದಾರೆ. 'ತಾಂಡೆ'-ಯಲ್ಲಿ. ತಾವು ಮಾತ್ರ ಹಿರಿಯ ಕೋಡಂಗಿಗಳಾಗಬೇಕು. ಇತರೇ ಲಂಬಾಣಿಗಳು ಗೇಯಬೇಕು - ಎಂದು ಕಟುವಾಗಿ ಮಾತಾಡಿದ ರೀತಿ ಹಸಿ–ಹಸಿಯಾಗಿದೆ. ಈತ ಇಂಜಿನಿಯರ್ ಅಲ್ಲವೇ ! ಗದ್ದೆ, ಹೆಂಡತಿಯ ಹೆಸರಲ್ಲಿದ್ದು, ಲಂಬಾಣಿಗರ ಟೊಂಕದ ಮೇಲೆ ಚಪ್ಪಡಿಕಲ್ಲು ಹೇರುವ ಸಾಹಸಕ್ಕೂ ಕೈಹಾಕಿದ್ದಾನೆ. ಜೀತ ಗೇಯುತ್ತಿರುವವರ ಬಗ್ಗೆ ಮಾತಾಡಲಾರ. ಆದರೂ ಇವ ವಿಚಾರವಾದಿಯಂತೆ.

ಇವರ ನಾಲಿಗೆಗೆ ಮಡಿ-ಮೈಲಿಗೆಯ ಲೇಪನವಾಗಿದೆ. ನನ್ನ ಗದ್ದೆಯಲ್ಲಿ ಗೇಯುವ (ನನ್ನ) ಲಂಬಾಣಿಗರಿಗೆ ಸರಿಯಾದ ರೀತಿಯಲ್ಲಿ ಕೂಲಿ ಕೊಡುತ್ತೇನೆ ಎಂದು ಸಾರಲಿಲ್ಲ. ಲಂಬಾಣಿಗರ ಹೆಸರು ಹೇಳಿ, ಹಲವು ಪ್ರಕರಣಗಳ ದಾಖಲೆಗಳನ್ನೂ ಸ್ಥಾಪಿಸಿದ 'ರಾ-ಘೋಡಾ'- ಬಗ್ಗೆ ಚಕಾರವೆತ್ತಲಿಲ್ಲ. ಬೆಳ್ಚಿ, ಪಿಪ್ರ, ನಾರಾಯಣಪುರ ಗಲಭೆ, ದಾವಣಗೆರೆ ಹತ್ತಿರ ಲಂಬಾಣಿ ಹೆಂಗಸಿನ ಮೇಲೆ ನಡೆದ ಅತ್ಯಾಚಾರದ ಬಗ್ಗೆ ಮಾತಾಡಲಿಲ್ಲ. ಇವರಿಗೆ ದಲಿತ ಯಾರು ಗೊತ್ತಿಲ್ಲ...... ಹೀಗೆ ಯೋಚಿಸುತ್ತಿದ್ದಂತೆ;

ಭಾಷಣಕಾರರ ಹೆಸರು ಕೂಗಲಾಯ್ತು. ವೇದಿಕೆಯ ಮೇಲೆ ಕೂತ ಕೆಲವರು ಹೊಸ ಅಳಿಯನ (ಯಂದಿರ) ಅನ್ವೇಷಣೆಯಲ್ಲಿ ತೊಡಗಿದ್ದರೆಂದು ತೋರುತ್ತದೆ. ಕೆ. ಎ. ಎಸ್., ಐ. ಎ. ಎಸ್. ಅಳಿಯಂದಿರು ಇವರಿಗೆ ಬೇಕು. ಅವರ ಮೇಲೆ ಕಪ್ಪುಹಣದ ಮಳೆಗರೆಯಲು ರೆಡಿ. ವರದಕ್ಷಣೆ ಸ್ವೀಕರಿಸಿ ಅಧಿಕಾರಿಗಳಾಗುವ

ಇವರು ಸಮಾಜದ (ಕೆಲವು ತಿಂಗಳ ಹಿಂದೆ ಐವತ್ತು ಸಾವಿರಕ್ಕಿಂತ ಹೆಚ್ಚು ವರದಕ್ಷಿಣೆ ಸ್ವೀಕರಿಸಿ ಮದುವೆಯಾದ ಒಬ್ಬ ವಿಚಾರವಾದಿ ವೇದಿಕೆಯ ಮೇಲೆ ಕೂತಿದ್ದ) ಏಳ್ಗೆಯಲ್ಲಿ ಪಾತ್ರಧಾರಿಗಳಾಗುವುದು ಹೇಗೆ ?

ನನ್ನ ವಿಚಾರಗಳು ತಲೆಕೆಳಗಾದವು. ನನ್ನ ಇನ್ನೊಬ್ಬ ಸ್ನೇಹಿತ, ಗಡುಸಾಗಿಯೇ ಮಾತಾಡಿದರೂ, ಅವನ ನಾಲಿಗೆ ಪರಿತವಾಗಿದ್ದರೂ ವಿಷಯಗಳ ಮುಂಡನೆ, ಹಿಡಿತವಿರಲಿಲ್ಲ. ವರದಕ್ಷಿಣೆ ಬಯಸುವ, ವೇದಿಕೆಯ ಮೇಲೆ ಬೇಕು ಎಂದು ಪೆದ್ದ-ಪೆದ್ದಾಗಿ ಸಾರುವ, ಸಭಿಕರಿಂದ ಚಪ್ಪಾಳೆ ತಟ್ಟಿಸಿಕೊಳ್ಳುವ, ಈತನಿಗೆ, ಸಾಮಾಜಿಕ ಸಮಸ್ಯೆಗಳ ಬಗ್ಗೆ ಕಾಳಜಿಯಿಲ್ಲ. ಶೋಷಣೆಯ ಮುಖಗಳೆಷ್ಟು ಗೊತ್ತಿಲ್ಲ. ಅಬ್ಬರದ ಧ್ವನಿಯಲ್ಲಿ ಭಾಷಣ ಸಾಗಿತ್ತು. ರಾಜಕೀಯ ಅಂಶಗಳ ಚೆಲ್ಲಾಟ. ಸ್ಥಿತಿಗತಿಯ ಬಗ್ಗೆ ಮೂಗಾಟ. ಕನ್ನಡ ಅಲ್ಲಲ್ಲಿಯೇ ಕೈಕೊಡುವ ಮೊಂಡಾಟ.

ಹೀಗೆ ಸಾಗಿತು ವಿಚಾರ. ನನ್ನ ಮಿತ್ರರಿಗೆ ನನ್ನ ಮಾತು ಮೊನಚಾಗಿ ತೋರಿರಬೇಕು. ಸವರ್ಣಿಯರ ದಬ್ಬಾಳಿಕೆ, ಸಾಮಾಜಿಕ ಕಂದಕಕ್ಕೆ ಬಲಿಯಾಗುತ್ತಿರುವ ಈ ಜನ ಇಂದು ಎಚ್ಚೆತ್ತುಕೊಳ್ಳಬೇಕಾಗಿದೆ. ವಿದ್ಯಾವಂತರು ವಿಚಾರವಂತರಾಗಬೇಕಾಗಿದೆ, ಜವಾಬ್ದಾರಿಯುತವಾಗಿ ನಡೆದುಕೊಳ್ಳಬೇಕಾಗಿದೆ. ಲಂಬಾಣಿಗರ ಹೆಸರು ಹೇಳಿ ಬೊಜ್ಜು ಬೆಳೆಸುವ, ತಲೆಹಿಡುಕ ಲಂಬಾಣಿ ರಾಜಕಾರಣಿಗಳಿಗೆ ಕಣ್ಣು ತೆರಿಸಬೇಕಾಗಿದೆ. 'ಬಂಜಾರ ಹಾಸ್ಟೆಲ್'ಗಳು ಇಲ್ಲದೇ ಇರುವ ಸಂದರ್ಭದಲ್ಲಿ, ಲಂಬಾಣಿ ಮುಖಂಡರು ತಮ್ಮ ಮಕ್ಕಳ ಮದುವೆಗಳನ್ನು ಲಾಲಬಾಗಿನ ಮರ–ಗಿಡಗಳ ಮೇಲೆ ಹಣಚೆಲ್ಲಿ ನಡೆಸುತ್ತಾರೆ. ಬೆಚ್ಚನೆಯ ಕಾರುಗಳಲ್ಲಿ, ಹವನಿಯಂತ್ರಿತ ಬಚ್ಚಲು ಮನೆಗಳಲ್ಲಿ ನಮ್ಮ 'ತಾಂಡ್ರಿ'ಗಳ ಬಗ್ಗೆ ಕನಸು ಕಾಣುವ ಇವರನ್ನು ನಂಬಿ ಕೂರುವುದರಲ್ಲಿ ಅರ್ಥವಿದೆಯೇ ?

ಕೊನೆಗೂ ಒಂದು ವಿಚಾರವೇದಿಕೆ ಸೃಷ್ಟಿಯಾಗಿ ಲಂಬಾಣಿಗರ ಆಗು–ಹೋಗುಗಳ ಬಗ್ಗೆ ವಿಚಾರ ವಿನಿಮಯ ನಡೆಯಿತು ಎಂದಾಗ ಎಲ್ಲರೂ ಗಲ್ಲಅರಳಿಸಬೇಕು. ಏಕೆಂದರೆ ನಾಳೆ ಇತಿಹಾಸ, ದಾಖಲೆ ಇಡಬಹುದಲ್ಲವೇ ?

ಶಿವಮೊಗ್ಗೆಯ ಬೀದಿಯ ಮರಗಳು ಬೋಳಾಗಿ ನಿಂತಿದ್ದವು. ಸೂರ್ಯ ಮರಗಳ ಕೊಂಬೆಗಳಲ್ಲಿ ತೂರ ಹೊಡೆಯುತ್ತಾ ಅಡ್ಡಾ-ದಿಡ್ಡಿಯಾಗಿ ಓಡುತ್ತಲಿದ್ದ. ಮ್ಲಾನಮುಖಹೊತ್ತು, ಕಾಲೆಳೆಯುತ್ತಾ ನಿಲ್ದಾಣದ ಕಡೆ ಹೊರಟು ಬಂದಿದ್ದೆ.

* ತಾಂಡ್ರಿಗಳು = ಹೆಂಗಸರು

# ಎಂಪಿಡಾಕ್ಲಿಸ್‌ನ ಜೋಡು

—ಹೆಚ್. ಕೆ. ರಾಮಚಂದ್ರಮೂರ್ತಿ

---

ಬ್ರೆಕ್ಟ್ ಬರೆದ ಬ್ಯಾಲೆಡ್‌ಗಳ ಪೈಕಿ ಪುರಾತನ ಗ್ರೀಕ್ ತತ್ವಜ್ಞಾನಿ ಎಂಪಿಡಾಕ್ಲಿಸ್‌ನನ್ನು ಕುರಿತ ಕವನ ಅತ್ಯಂತ ಪ್ರಸಿದ್ಧವಾದದ್ದು. ಪುರಾಣೇತಿಹಾಸಗಳಿಂದ ಆಯ್ದ ವಸ್ತು-ವಿಚಾರಗಳನ್ನು ಬ್ರೆಕ್ಟ್ ಹೊಸ ಬೆಳಕಿನಲ್ಲಿಟ್ಟು ನೋಡುತ್ತಿದ್ದ ಆಳವಾದ ವಿಚಾರವಂತಿಕೆಯನ್ನು ಮೂಡಿಸಿ ಕಾವ್ಯವನ್ನು ಅರ್ಥವತ್ತಾಗಿಸುತ್ತಿದ್ದ. ಅಂಥ ಒಂದು ರಸಮಯ ಕವನ 'ಎಂಪಿ ಡಾಕ್ಲಿಸ್‌ನ ಜೋಡು'.

**ಬ್ರೆಕ್ಟ್ ಹೇಳುವ ಕಥೆ**

'ಅಗ್ರಿಗೆಂಟಮ್‌ನ ಎಂಪಿಡಾಕ್ಲಿಸ್‌ಗೆ ವಯಸ್ಸಾಗುತ್ತ ಬಂದಿತ್ತು. ಬಹು ಕಾಲದಿಂದ ಅವನಿಗೆ ಊರಿನ ಗಣ್ಯರು ಅಪಾರ ಗೌರವಾದರ ಸಲ್ಲಿಸಿದ್ದರು. ಪರಿಪೂರ್ಣವಾದ ಬಾಳನ್ನು ನಡೆಸಿದ ಅವನಿಗೆ ಧನ್ಯತಾಭಾವ ಬಂದಿತ್ತು. ಅವನು 'ಇನ್ನು ಈ ಬಾಳು ಮುಗಿಯಲಿ' ಅಂದುಕೊಂಡವನೇ ಸಾವಿಗೆ ಸಿದ್ಧನಾದ. ಆದರೆ ಬಹಳಷ್ಟು ಜನರ ಪ್ರೀತಿಗೆ ಭಾಜನನಾದ ತಾನು ಅವರ ಎದುರಿಗೆ ಕರುಣಾಜನಕವಾದ ಸ್ಥಿತಿಯಲ್ಲಿ ಸಾಯುವುದಕ್ಕಿಂತಲೂ ಯಾರಿಗೂ ಕಾಣದ ಹಾಗೆ ಅದೃಶ್ಯವಾಗುವುದೇ ಲೇಸೆಂದು ನಿಶ್ಚಯಿಸಿದ.

ಒಂದು ದಿನ ಅವನು ತನ್ನ ಇಷ್ಟ ಮಿತ್ರರೆಲ್ಲರನ್ನು ಬರಮಾಡಿಕೊಂಡ. ಅವರಲ್ಲಿ ಕೆಲವರನ್ನು ಕರೆದುಕೊಂಡು ಹತ್ತಿರದಲ್ಲೇ ಇದ್ದ ಎಟ್ನಾ ಅಗ್ನಿ ಪರ್ವತಕ್ಕೆ ಪ್ರವಾಸ ಹೊರಟ. ಈ ಸಂಗಡಿಗರನ್ನು ಆಯ್ದುಕೊಳ್ಳುವಾಗ ಯಾವೊಂದು ಭೇದಭಾವವಿರಲಿಲ್ಲ.

ಬೆಟ್ಟ ಹತ್ತಲು ಪ್ರಾರಂಭಿಸಿದರು. ಪ್ರಯಾಣದ ಅಪಾಯಕರ ಏರಿಕೆ-ಜಾರಿಕೆಗಳ ನಡುವೆ ಮಾತು ವಿರಳವಾಯಿತಾದರೂ ಚಾಟೋಕ್ತಿಗಳಿಗೂ ನಾಟಿನುಡಿಗಳಿಗೂ ಬೇಕಾದಷ್ಟು ಅವಕಾಶವಿತ್ತು. ಬೆಟ್ಟ ಹತ್ತುವವರು ಮೈಯೆಲ್ಲಾ ಕಿವಿಯಾಗಿ ಕೇಳಿಸಿಕೊಳ್ಳುತ್ತಿದ್ದರು. ಕೊನೆಗೊಮ್ಮೆ ಜ್ವಾಲಾಮುಖಿಯ ಶಿಖರವನ್ನು ತಲುಪಿದ್ದಾಯಿತು. 'ಉಸ್ಸಪ್ಪಾ' ಎಂದು ಎಲ್ಲರೂ ಅಲ್ಲಲ್ಲಿ ಕಾಲುಚಾಚಿ ಮಲಗಿದರು, ಮೈಕೈ ಮುರಿದರು. ದಣಿವಾರಿಸಿಕೊಂಡರು. ಪರ್ವತದ ನೆತ್ತಿಯ ಮೇಲಿಂದ ಕಾಣಸುವ ವಿಹಂಗಮ ನೋಟದ ರಸದೂಟ ಉಂಡರು.

ಏತನ್ಮಧ್ಯೆ ಅವರ 'ಗುರು' ಎಲ್ಲರ ಕಣ್ಣು ತಪ್ಪಿಸಿ ಜ್ವಾಲಾಮುಖಿಯೊಳಕ್ಕೆ ಇಳಿದಿದ್ದ. ಸೋಜಿಗವೆಂದರೆ ಯಾರೂ ಅವನ ಗೈರುಹಾಜರಿ ಗಮನಿಸಿರಲಿಲ್ಲ. ವಿರಳವಾಗಿ ಆಗೊಮ್ಮೆ ಈಗೊಮ್ಮೆ ಅವನಿಂದ ಬರುತ್ತಿದ್ದ ಮಾತುಗಳು ನಿಂತ ಬಹಳ ಹೊತ್ತಿನ ಮೇಲೆ ಅವರಿಗೆ ಎಚ್ಚರ. ಗುರುವನ್ನು ಹುಡುಕಲು ಪರ್ವತದ ಮೇಲೆ ಅತ್ತಿತ್ತ ಅಲೆದಾಟ, ಪರದಾಟ. ಆದರೆ ಆ ಹೊತ್ತಿಗೆ ಅವನು ನಿಧಾನವಾಗಿ ಒಳಕ್ಕೆ ಇಳಿಯುತೊಡಗಿದ್ದ. ಇಳಿಜಾರಿನಲ್ಲಿ ಒಮ್ಮೆ ನಿಶ್ಚಲನಾಗಿ ನಿಂತ ಜೊತೆಯವರ ಮಾತುಕತೆ ದೂರದಲ್ಲಿ ಅಸ್ಪಷ್ಟವಾಗಿ ಕೇಳಿಸುತ್ತಿತ್ತು. ಶಬ್ದಗಳು ಮಸುಕಾಗುತ್ತಿದ್ದವು–ಮಾತು ಅರ್ಥ ಕಳಚಿಕೊಳ್ಳುತ್ತಿತ್ತು. ಸಾವು ಹತ್ತಿರ ಬರುತ್ತಿತ್ತು

ಜ್ವಾಲಾಮುಖಿಯ ಬಾಯೊಳಗಿನ ಇಳಿಜಾರಿನಲ್ಲಿ ನಿಂತು ತನಗೆ ಇನ್ನು ಪ್ರಸ್ತುತವಲ್ಲದ ಬದುಕಿನ ಕಡೆ ಬೆನ್ನು ತಿರುಗಿಸಿದ್ದ. ಮೆಲ್ಲಗೆ ಬಗ್ಗಿ ಜೋಪಾನವಾಗಿ ಒಂದು ಕಾಲಿನ ಜೋಡು ಕಳಚಿದ. ಮರಣಾಸನ್ನನ ಮುಖದಲ್ಲಿ ಮಂದಹಾಸ. ಜೋಡನ್ನು ಒಂದು ಪಕ್ಕಕ್ಕೆ, ಸ್ವಲ್ಪ ದೂರದಲ್ಲಿ ಬೀಳುವ ಹಾಗೆ ಎಸೆದ.

ಬೇಕೆಂದೇ ಅವನು ಹಾಗೆ ಮಾಡಿದ್ದ. ಜೋಡು ತಕ್ಷಣ ತನ್ನ ಸಂಗಡಿಗರ ಕಣ್ಣಿಗೆ ಬೀಳಬಾರದು. ಆದರೆ ಅದು ಕರಟಿ ನಶಿಸಿ ಹೋಗುವುದಕ್ಕೆ ಮುಂಚೆಯೇ ಜನ ಅದನ್ನು ನೋಡಬೇಕು–ಇದು ಅವನ ಇಂಗಿತ. ಆಮೇಲೆ ಅವನು ಬೆಂಕಿ ಪರ್ವತದೊಳಕ್ಕೆ ಇಳಿದು ಕಣ್ಮರೆಯಾದ,

ಅವನನ್ನು ಬಹಳ ಹೊತ್ತು ಹುಡುಕಿ ಸೋತ ಪ್ರವಾಸಿಗರು ಊರಿಗೆ ಹಿಂತಿರುಗಿದರು. ಕ್ರಮೇಣ ಮುಂದಿನ ಕೆಲವು ವಾರಗಳಲ್ಲಿ, ತಿಂಗಳುಗಳಲ್ಲಿ ಅವನು ಇಚ್ಛಿಸಿದ ರೀತಿಯಲ್ಲಿ ಅವನ 'ಸಾವು' ಪ್ರಾರಂಭವಾಗಿತ್ತು. ಅವನು ಹಿಂತಿರುಗಿ ಬರಬಹುದೆಂದು ಹಲಕಾಲ ಕಾದವರು ಕೆಲವರು. ಇನ್ನು ಅವನ 'ಕಥೆ' ಮುಗಿಯಿತೆಂದು ಅವನ ಆಸೆ ಬಿಟ್ಟವರು ಕೆಲವರು. ಅವನನ್ನು ಕೇಳಬೇಕೆಂದಿದ್ದ ಪ್ರಶ್ನೆಗಳು ಹಲವರ ಮನಸ್ಸಿನಲ್ಲಿ ಹಾಗೆ ಉಳಿದವು. ಇನ್ನು ಕೆಲವರು ತಮ್ಮ ಪ್ರಶ್ನೆಗಳಿಗೆ ತಾವೇ ಹೇಗೋ ಏನೋ ಉತ್ತರ ಹೇಳಿಕೊಂಡು ತೆಪ್ಪಗಾದರು, ಹೀಗೆ ಸದ್ದುಗದ್ದಲವಿಲ್ಲದೆ ಜನಸಾಮಾನ್ಯರ ದಿನನಿತ್ಯದ ಜೀವನದಿಂದ ಬಹು ಸಾಧಾರಣವಾದ ರೀತಿಯಲ್ಲಿ ಅವನು ಕಣ್ಮರೆಯಾದ, ನಾವು ನಡೆಯುವಾಗ ಆಕಾಶದಲ್ಲಿನ ಸಣ್ಣಪುಟ್ಟ ಮೋಡಗಳು ನಿಧಾನವಾಗಿ ದೂರ ದೂರಕ್ಕೆ ಸಾಗುತ್ತಾ ಉಳಿದ ಮೋಡಗಳ ಜತೆ ಬೆರೆತು ಬಿಡುವುದಿಲ್ಲವೇ, ಹಾಗೆ.

ಆ ಮೇಲೆ ಪ್ರಾರಂಭವಾದವು–ಊಹಾಪೋಹಗಳು, ಕಾಲಿಲ್ಲದ ಕಥೆಗಳು. ಅಮರಜೀವಿಯಾದ ಎಂಪಿಡಾಕ್ಲಿಸ್ ಸಾಯುವುದೆಂದರೇನು ಅರ್ಥ ? ಸರಿ ಅವನ ಯಥಾರ್ಥ ಬದುಕಿನ ಸುತ್ತ ರಹಸ್ಯದ ಕೋಟೆಕೊತ್ತಲಗಳೆದ್ದವು. ಅಸಾಧಾರಣ

ವ್ಯಕ್ತಿಯೊಬ್ಬನಿಗೋಸ್ಕರ, ಜೀವನದ ಗತಿಯನ್ನೇ ಬದಲಾಯಿಸಬಲ್ಲ ಘಟನೆಗಳು ಉಂಟಾಗಿರುವ ಸಂಭವವಿತ್ತೆಂಬ ಪೊಳ್ಳು ಮಾತುಗಳು ಹುಟ್ಟಿಕೊಂಡವು. ಆದರೆ.... ಆ ಸಮಯಕ್ಕೆ ಸರಿಯಾಗಿ ಅವನ ಜೋಡು ಅವರ ಕಣ್ಣಿಗೆ ಬೀಳಬೇಕೇ ? ಕೈಯಿಂದ ಮುಟ್ಟಿ ಕಣ್ಣಿಂದ ನೋಡಲು ಸಾಧ್ಯವಾದ ಆ ಚರ್ಮದ ಜೋಡು. ಸಾಮಾನ್ಯ ನೊಬ್ಬನ ಕಾಲಿನಲ್ಲಿ ಸವೆದ ಸಾಮಾನ್ಯ ಜೋಡು ! ಕಣ್ಣಿಗೆ ಕಾಣದುದರ ಬಗ್ಗೆ ಸಲ್ಲದ ಕಲ್ಪನೆಗಳನ್ನು ಸೃಷ್ಟಿಸಿ ನಂಬುವ ಜನರಿಗೋಸ್ಕರವೇ ಬಿಟ್ಟು ಹೋಗಿದ್ದ ಜೋಡು ! ಅದರಿಂದಾಗಿ ಎಂಪಿಡಾಕ್ಲಿಸ್‌ನ ಕೊನೆಯ ದಿನಗಳು ನಿಜವಾದ ವ್ಯಕ್ತಿಯೊಬ್ಬನ ಯಥಾರ್ಥ ಜೀವನದ ಭಾಗವೆನ್ನುವುದು ಖಚಿತವಾಯಿತು. ಎಂಪಿಡಾಕ್ಲಿಸ್ ಎಲ್ಲ ಮನುಷ್ಯರಂತೆಯೇ ಸತ್ತಿದ್ದ. ಅವನ ಜೋಡು ಎಲ್ಲರನ್ನು ನೋಡಿ ನಕ್ಕಿತು.

ಇಂಥವನ ಬದುಕನ್ನು ಕುರಿತು ಹಲವರು ಹಲವು ರೀತಿಯಲ್ಲಿ ಯೋಚಿಸಿರಬಹುದು. ಕೆಲವರು ಅವನೊಬ್ಬ ನಾಲಾಯಕ್ಕು ಮನುಷ್ಯ, ತಾನು ದೇವರಾಗಬೇಕೆಂದೂ, ಜನ ತನ್ನನ್ನು ಪೂಜಿಸಬೇಕೆಂದೂ ಉದ್ದೇಶಿಸಿ ಹಾಗೆ ಕಣ್ಮರೆಯಾದ, ಎಟ್ನಾ ಜ್ವಾಲಾಮುಖಿಯೊಳಕ್ಕೆ ಧುಮುಕಿದ' ಅಂದರು. ಇನ್ನು ಕೆಲವರಾದರು 'ತಾನು ಹುಟ್ಟು ಬದುಕಿನ ಚಕ್ರದೊಳಗೆ ಸಿಕ್ಕದ ಹುಲುಮಾನವನಲ್ಲ ಎಂದು ತೋರಿಸಲು ಅವನು ಹಾಗೆ ಮಾಡಿದ, ಆದರೆ ಅವನಿಗೆ ಅವನ ಜೋಡು ಕೈಕೊಟ್ಟಿತು, ನೋಡಿ. ಯಾಕೆಂದರೆ ಅದರಿಂದ ಅವನೊಬ್ಬ ಮನುಷ್ಯನೆಂಬುದು ಸ್ಪಷ್ಟವಾಯಿತಲ್ಲವೇ ? ಅಂದರು. ಇನ್ನು ಕೆಲವರು ಗೊಣಗಿದರು : ಅಯ್ಯೋ ಅವನೊಬ್ಬ ಪಾಪಿ ಬಿಡಿ ಪಾಪಿಯ ಉದ್ದೇಶವನ್ನರಿತು ಹೇಸಿ, ರೋಸಿದ ಜ್ವಾಲಾಮುಖಿ ಅವನ ಜೋಡನ್ನು ಬೇಕೆಂಟೇ ಹೊರಕ್ಕೆ ಉಗುಳಿತು ಅಂದರು.

ಆದರೆ ನಾವು ಹೀಗೆನ್ನೋಣ ; ನಮ್ಮ ಪಾಲಿಗೆ ಇದಿಷ್ಟು ಸತ್ಯ. ಅವನು, ಒಂದು ವೇಳೆ ಜೋಡು ಕಳಚಿ ಬಿಸಾಡಲಿಲ್ಲವೆಂದೇ ಇಟ್ಟುಕೊಳ್ಳೋಣ. ಆದರೆ ಅಸ್ಪಷ್ಟವೂ ಅವಿಚಾರಯುತವೂ ಆದುದನ್ನು ಇನ್ನಷ್ಟು ಅಸ್ಪಷ್ಟಗೊಳಿಸಿ, ಹಾಸ್ಯಾಸ್ಪದವಾದುದನ್ನು ಕುರುಡು ಕುರುಡಾಗಿ ನಂಬಿ ಬಿಡುವ ನಮ್ಮ ಮೂರ್ಖತನ ಅವನಿಗೆ ಹೊಳೆದಿರಲಿಲ್ಲವೆಂಬುದಂತೂ ನಿಜ. ಯಾವುದೇ ಸಂದರ್ಭದಲ್ಲಿ ಸತ್ಯಾಸತ್ಯಗಳನ್ನು ವಿಚಾರ ಮಾಡದೆ ನಂಬುವ ನಮ್ಮ ದಡ್ಡತನದ ಅರಿವು ಅವನಿಗಿರಲಿಲ್ಲ.

ಅದೇನೇ ಇರಲಿ–ಇಷ್ಟಂತೂ ನಿಜ. ಅವನ ಅವಜ್ಞತೆಯ ಬಗ್ಗೆ ಅಗ್ನಿ ಪರ್ವತಕ್ಕೆ ಸಿಟ್ಟು ಬಂದಿರಲಿಕ್ಕಿಲ್ಲ. ಯಾಕೆಂದರೆ ಅಗ್ನಿ ಪರ್ವತಕ್ಕೆ ಯಾರ ಬಗ್ಗೆಯೂ ಸಿಟ್ಟು ಬರುವುದಿಲ್ಲ–ಯಾರದ್ದೂ ಲಕ್ಷ್ಯವಿಲ್ಲ. ಪ್ರಕೃತಿ ಧರ್ಮದಂತೆ ಅದು ಲಾವಾ

ಉಗುಳಿದಾಗ, ಒಳಗೆ ಹುದುಗಿದ್ದ ಎಂಪಿಡಾಕ್ಲಿಸ್‌ನ ಜೋಡೂ ಸಹ ಹೊರಕ್ಕೆ ಚಿಮ್ಮಿತ್ತು, ಆದರೆ ಅದನ್ನು ಕಂಡ ಅವನ ಒಡನಾಡಿ ವಿದ್ವನ್ಮಣಿಗಳು ಸ್ವಕಪೋಲ ಕಲ್ಪನೆಗಳನ್ನು ಹೆಣೆದಾಗ, ಗಹನಗಹ್ವರವಾದ ತಾತ್ವಿಕ ರಹಸ್ಯಗಳನ್ನು ಸೃಷ್ಟಿಸುವುದರಲ್ಲಿ ವ್ಯಸ್ತರಾಗಿದ್ದಾಗ ಚರ್ಮದ ಜೋಡು ಅವರ ಕೈಗೆ ಸಿಕ್ಕಿತು. ಅವರು ಅವಾಕ್ಕಾದರು. ಗೊಂದಲದಲ್ಲಿ ಬಿದ್ದರು. ತಮ್ಮ ಗುರುವಿನ ಜೋಡನ್ನು ಅಂಗೈಯಲ್ಲಿಟ್ಟುಕೊಂಡು ನೋಡಿಯೇ ನೋಡಿದರು.

* ಎಂಪಿಡಾಕ್ಲಿಸ್ ಕ್ರಿ. ಪೂ. 490–430ರ ನಡುವೆ ಸಿಸಿಲಿ ದ್ವೀಪದ ಅಗ್ರಿಗೆಂಟಮ್ ಎಂಬಲ್ಲಿ ಜೀವಿಸಿದ್ದನೆನ್ನಲಾದ ಒಬ್ಬ ಮಹಾಜ್ಞಾನಿ. ಪ್ರಕೃತಿದತ್ತವಾದ ಪಂಚೇಂದ್ರಿಗಳ ಮೂಲಕ ಲಭಿಸುವ ಅರಿವನ್ನು, ಗ್ರಹಿಕೆಯನ್ನು ನಾವು ಕಡೆಗಣಿಸಬಾರದು. ಪ್ರಕೃತಿಯಲ್ಲಿನ ಸೂಕ್ಷ್ಮಾತಿಸೂಕ್ಷ್ಮ ವ್ಯಾಪಾರಗಳನ್ನು ಗ್ರಹಿಸಲೆಂದೇ ಪ್ರಕೃತಿ ನಮಗೆ ಇಂದ್ರಿಯಗಳನ್ನು ಕೊಟ್ಟಿದೆ ಎಂದು ಅವನು ಸಾರುತ್ತಿದ್ದ. ಚಿತ್ರ ಬರೆಯಲು ಬಣ್ಣಗಳನ್ನು ಹೇಗೆ ಬೆರೆಸಬೇಕು, ಬ್ರೆಡ್ ತಯಾರಿಸಲು ಹಿಟ್ಟು–ಹುದುಗನ್ನು ಯಾವ ಪ್ರಮಾಣದಲ್ಲಿ ಸೇರಿಸಬೇಕು ಎಂಬೆಲ್ಲ ವಿಚಾರಗಳನ್ನು ಅವನು ವಿಚಾರ ಮಾಡಿದ್ದ. ಬೀಸಿ ಹೊಡೆಯುವ ಕಲ್ಲು ಕವಣೆಯ ರಚನೆಯನ್ನು ಕುರಿತು ವೈಜ್ಞಾನಿಕವಾದ ವಿವೇಚನೆ ನಡೆಸಿದ್ದ, ಅಗೋಚರವಾದ ಗಾಳಿಯ ಸ್ವರೂಪವನ್ನು ಕುರಿತು ಕರಾರುವಕ್ಕಾದ ವಿವರಣೆ ಕೊಟ್ಟಿದ್ದ.

(ನೋಡಿ : ಬೆಂಜಾಮಿನ್ ಫ್ಯಾರಿಂಗ್‌ಟನ್ : "ಗ್ರೀಕ್ ವಿಜ್ಞಾನ",–ಸಂಪುಟ 1)

# ಪ್ರೇಕ್ಷಕನಿಗೆ....

ಕತ್ತಲಿಗೆ ಬೆನ್ನುಕೊಟ್ಟು
ಬೆಳಕಿನತ್ತ ಕತ್ತುಚಾಚಿ
ನೀವು ಕುಳಿತಿದ್ದೀರಿ
ನಾಟಕ ನೋಡುತ್ತಿದ್ದೀರಿ
ಗೊತ್ತೇ ನಿಮ್ಮ ಹಿಂಬದಿಯಲ್ಲೇನಿದೆ ?

ಕತ್ತನ್ನು ಒಂದೇ ಏಟಿಗೆ ಕತ್ತರಿಸುವ ಕತ್ತಿಗಳು
ಧಗಧಗಿಸುತ್ತಿರುವ ಬಂದೂಕುಗಳು
ತಪ್ಪು ಹಾದಿಯೆಡೆ ದಿಟ್ಟಿಸುತ್ತಿರುವಾಗಲೇ
ದೇಶವನ್ನಿಡೀ ಕತ್ತಲೆಗೆ ತಳ್ಳಿದ ಕೈಗಳು

ಮರೆತದ್ದನ್ನು ಮತ್ತೊಮ್ಮೆ ನೋಡಲು,
ಕಿವಿಗೊಟ್ಟು ಕೇಳುತ್ತಿರುವುದನ್ನು
ಮನದಟ್ಟು ಮಾಡಿಕೊಳ್ಳಲು,
ಸಂದಿಗೊಂದಿಗಳಲ್ಲಿ ಹೂತಿಟ್ಟ ನಿಮ್ಮ ತಪ್ಪುಗಳನ್ನು
ಹಾದಿಗೆಳೆದು ಒಪ್ಪಿಕೊಳ್ಳಲು
ನಿಮಗೆ ನೆನಪಿಸುತ್ತಿದ್ದೇನೆ.

ನೀವೆಂಥ ಭಾಗ್ಯವಂತರು !
ನಾಟಕ ಖುಷಿ ಕೊಡುತ್ತಿಲ್ಲವೇ
ಎದ್ದೋಡಿ ಬರುತ್ತೀರಿ.
ಓಡಿ ಬೇಲಿಯ ನಡುವೆ ನಿಲ್ಲುವ
ನಿಮ್ಮಲ್ಲಿರುವುದು ಮುಗ್ಧತೆಯಲ್ಲವೇ ?

ರಂಗದ ಮೇಲೆ ನಟ—
ಬದುಕಿನ ಮಾತಾಡುತ್ತಾನೆ
ಸಾವನ್ನು ಅಣಕಿಸುತ್ತಾನೆ
ನಿಮ್ಮ ಬದುಕಿನಲ್ಲೇನು ಮಾಡುತ್ತೀರಿ ?
ನೋಡಿ, ಇನ್ನೊಮ್ಮೆ ನೆನಪಿಸುತ್ತೇನೆ
ಮುಂಬರುವ ಸಾವನ್ನು ಅವನಿಂದೇ ತೋರಿಸುತ್ತಿದ್ದಾನೆ.

—ಎಸ್. ಮಾಲತಿ

(ಎಡ್ವರ್ಡ್‌ಬಾಂಡ್‌ನ ಪದ್ಯವೊಂದರ ಭಾವಾನುವಾದ)

# 'ಹೋರಾಟವೇ ವಿಮೋಚನೆಯ ದಾರಿ'-ಅಂಬೇಡ್ಕರ್

—ಎಲ್. ಹನುಮಂತಯ್ಯ

---

ಏಪ್ರಿಲ್ 14, 1891 ರಂದು ಮಹಾರಾಷ್ಟ್ರದ ಮಣ್ಣಿನಲ್ಲಿ ಹುಟ್ಟಿದ ಡಾ॥ ಬಿ. ಆರ್. ಅಂಬೇಡ್ಕರ್ ಈ ದೇಶದ ದಲಿತ ಸಮುದಾಯದ ಮಹಾನ್ ಚೇತನ. ತಮ್ಮ ಇಡೀ ಜೀವಮಾನ ದಲಿತರ ವಿಮೋಚನೆಗಾಗಿ ಹೋರಾಟಗಾರರಾಗಿದ್ದ ಇವರು ಮನುಷ್ಯ ಮನುಷ್ಯರ ಮಧ್ಯೆ ಸಂಬಂಧ ಕಲ್ಪಿಸದ, ಮನುಷ್ಯ–ದೇವರ ಮಧ್ಯೆ ಸಂಬಂಧ ಕಲ್ಪಿಸುವ ಧರ್ಮ "ನಿಜವಾದ ಧರ್ಮ" ಅಲ್ಲ ಎಂಬ ಮಾತನ್ನು ಹೇಳಿದವರು. ನಮ್ಮ ದೇಶದ್ದು ಭವ್ಯ ಸಂಸ್ಕೃತಿ, ಪರಂಪರೆ ಎಂದು ಬೊಬ್ಬೆಹೊಡೆಯುತ್ತಿರುವ ಇಲ್ಲಿ ಮನುಷ್ಯನನ್ನು ಪ್ರೀತಿಸುವುದಿರಲಿ ಮುಟ್ಟುವುದು ಕೂಡ ಮಹಾಪಾಪವೆಂದು ಪರಿಗಣಿಸಿ ಕೋಟ್ಯಾಂತರ ಜನರನ್ನು ಸಮಾಜದಿಂದ ಹೊರಗಿಡಿಸಿ ಅಸ್ಪೃಶ್ಯರೆಂದು ಕರೆದು ಗುಲಾಮರನ್ನಾಗಿ ಉಪಯೋಗಿಸಿಕೊಂಡರು. ಇಂಥ ಕ್ರೂರ ಧರ್ಮದಲ್ಲಿ ಜನಿಸಿದ ಅಂಬೇಡ್ಕರ್ ನಾನು 'ಹಿಂದುವಾಗಿ ಹುಟ್ಟಿದರೂ ಹಿಂದುವಾಗಿ ಸಾಯಲಾರೆ' ಎಂದು ಹೇಳಿ ಬೌದ್ಧ ಧರ್ಮಕ್ಕೆ 1956ರ ಅಕ್ಟೋಬರ್ 4 ರಂದು ಲಕ್ಷಾಂತರ ಅಸ್ಪೃಶ್ಯರೊಂದಿಗೆ ಮತಾಂತರ ಹೊಂದಿದರು.

ನಾವು ಇಂದು ಅವರ 91ನೇ ಜನ್ಮದಿನವನ್ನು ಆಚರಿಸುತ್ತಿದ್ದೇವೆ. ಬೇರೆ ಬೇರೆ ರಾಜಕೀಯ ಪಕ್ಷಗಳು ದಲಿತ ಸಂಘಟನೆಗಳು ಈ ಸಮಯದಲ್ಲಿ ತಮ್ಮದೇ ಆದ ರೀತಿಯಲ್ಲಿ ಅವರ ಜನ್ಮದಿನವನ್ನು ಆಚರಿಸುತ್ತಿದ್ದಾರೆ. ಆಳುವ ಪಕ್ಷ ಅಂಬೇಡ್ಕರ್ ಪ್ರತಿಮೆ ನಿಲ್ಲಿಸಿ ಅವರ ಹೆಸರಿಡುವುದರಿಂದಲೇ ದಲಿತರ ಉದ್ಧಾರ ಎಂದು ಭಾವಿಸಿ, ಕೆಲವು ದಲಿತ ನಾಯಕರುಗಳ ನೇತೃತ್ವದಲ್ಲಿ ಭಾಷಣದ ದಿನಾಚರಣೆ ನಡೆಸಿತು,

ಇನ್ನೊಂದು ರಾಜಕೀಯ ಪಕ್ಷವಾದ ಭಾರತೀಯ ಜನತಾ ಪಕ್ಷಕ್ಕೆ ಇದ್ದಕ್ಕಿದ್ದಂತೆ ದಲಿತರ ಬಗ್ಗೆ ಪ್ರೀತಿ ಉಕ್ಕಿ ಅವರನ್ನು ಅಪ್ಪಿ ಮುದ್ದಾಡುವ ಸ್ಥಿತಿಗೋಗ್ಗಿದೆ. ಅವರು ಅಂಬೇಡ್ಕರ್ ಜನ್ಮ ದಿನಾಚರಣೆಯನ್ನು ಸಾಮಾಜಿಕ ಸಮತಾದಿನವಾಗಿ ಆಚರಿಸುತ್ತಿದ್ದಾರೆ. ಹಿಂದು ಧರ್ಮವನ್ನು ಬೇರುಗಳನ್ನಾಗಿಸಿ, ಜಾತಿ ವ್ಯವಸ್ಥೆಯ ಕೊಂಬೆಗಳೊಂದಿಗೆ ಬೆಳೆಯುತ್ತಿರುವ ಜಾತಿವಾದಿ ಶಕ್ತಿ ಅಂಬೇಡ್ಕರರನ್ನು ನೆನೆದು ಅವರನ್ನು ಮತ್ತಷ್ಟು ಮೈಲಿಗೆಯಾಗಿಸಿದ್ದಾರೆ.

ಅಂಬೇಡ್ಕರರನ್ನು ಹೋರಾಟದ ಜೀವಿಯೆಂಬುದನ್ನು ಮರೆತ ದಲಿತ ಸಂಘಟನೆಗಳೇ ಅವರನ್ನು ಪೂಜಿಸಿ, ಮೆರವಣಿಗೆ ಮಾಡುವುದೇ ನಮ್ಮ ಗುರಿ ಎಂಬಂತೆ ಆಚರಿಸಿವೆ. ಸ್ವತಃ ಅಂಬೇಡ್ಕರರೇ ವ್ಯಕ್ತಿಪೂಜೆಯನ್ನು ವಿರೋಧಿಸುತ್ತಿದ್ದರು. ಹಾಗೂ ಈ ರೀತಿಯ ಅವೈಜ್ಞಾನಿಕ ನಡುವಳಿಕೆಗಳನ್ನು ದಲಿತರು ತೊರೆಯಬೇಕು ಎಂಬುದನ್ನೂ ತಿಳಿಯದ ಇವರು ವಿರೊಧೀ ಕೆಲಸವನ್ನು ಮಾಡಿದ್ದಾರೆ.

ಅಂಬೇಡ್ಕರರನ್ನು 'ಹೋರಾಟದ ಚೇತನ' ಎಂದು ತಿಳಿದಿರುವ ಮಾತ್ರೊಂದು ದಲಿತರ ಸಂಘಟನೆ ದೇಶದಲ್ಲಿ ನಡೆಯುತ್ತಿರುವ ಕಗ್ಗೊಲೆಗಳನ್ನು ವಿರೋಧಿಸುವ ಮೂಲಕ ಅರ್ಥಪೂರ್ಣವಾದ ಅಂಬೇಡ್ಕರ್ ದಿನಾಚರಣೆಯನ್ನು ಆಚರಿಸಿದೆ.

ಒಟ್ಟಾರೆ ಅಂಬೇಡ್ಕರರ ಹೆಸರಿನಲ್ಲಿ ಬದುಕುತ್ತಿರುವ ಯಾವ ದಲಿತ ನಾಯರಿಗೂ ಅವರ ಹೆಸರೇಳುವ ಹಕ್ಕಿಲ್ಲ ಎಂಬುದನ್ನು ನಾವು ತಿಳಿಯಬೇಕು. ಕಾಂಗ್ರೆಸ್ಸೊಂದು ಉರಿಯುತ್ತಿರುವ ಬೆಂಕಿಯ ಮನೆ, ಅದರೊಳಗೆ ಹೋದ ದಲಿತರು ಜೀವಂತ ಸುಟ್ಟುಹೋಗುತ್ತಾರೆ" ಎಂದು ಅವರೇ ಹೇಳಿದ ಮಾತು ಇಂದಿಗೂ ಸತ್ಯವಾಗೇ ಉಳಿದಿದೆ.

ಸಂವಿಧಾನವನ್ನು ಬರೆದ ಅಂಬೇಡ್ಕರ್ ನೀವು ಸಂವಿಧಾನವನ್ನು ಸುಡುವುದಾದರೆ ನಾನು ಮೊಟ್ಟಮೊದಲಿಗನಾಗುತ್ತೇನೆ ಎಂಬ ಘೋಷಣೆ ಕೊಟ್ಟರು. ಕಾರ್ಯರೂಪಕ್ಕೆ ಬರದ ಸಂವಿಧಾನ ಅರ್ಥವಿಲ್ಲದ್ದು ಎಂಬ ಅಭಿಪ್ರಾಯಪಟ್ಟರು. ದಲಿತರ ಮುಖ್ಯ ವೈರಿಗಳು ಬ್ರಾಹ್ಮಣಿಕೆ ಮತ್ತು ಬಂಡವಾಳಶಾಹಿ ಎಂಬ ಮಾತನ್ನು ನಾವಿಂದು ಅರ್ಥಮಾಡಿಕೊಳ್ಳಬೇಕೇ ವಿನಃ ಅವರ ಭಾವಚಿತ್ರಕ್ಕೆ ಹಾರ ಹಾಕಿ ಕೈ ಮುಗಿದು ಅವರನ್ನು ದೇವರೆಂದು ಪೂಜಿಸುವುದು ಅತ್ಯಂತ ಅಪಾಯಕಾರಿ ಧೋರಣೆ ಹಾಗೂ ಇದನ್ನೇ ಅಂಬೇಡ್ಕರ್ ಅವರೇ ವಿರೋಧಿಸುತ್ತಿದ್ದರು. ನಮಗೆ ಹೇಳಿ ಹೋದ ಮುಖ್ಯ ತತ್ವಗಳೆಂದರೆ ವಿದ್ಯಾಭ್ಯಾಸ ಮಾಡಿ ಸಂಘಟನೆಯಿಂದ ಹೋರಾಟ ಳಿಯಿರಿ. "ಹೋರಾಟವೇ ದಲಿತರ ವಿಮೋಚನೆಯ ದಾರಿ' ಎಂಬುದನ್ನು ಅಂಬೇಡ್ಕರ್ ಕಲಿಸಿದ್ದಾರೆ. ಅದರಂತೆ ನಾವಿಂದು ನಡೆಯಬೇಕಾಗಿದೆ, ●

# ಜನಪದ ರಂಗಭೂಮಿಯ ಸಧ್ಯದ ಸಾಧ್ಯತೆಗಳು

—ಡಾ. ಬಸವರಾಜ ಮಲಶೆಟ್ಟಿ

---

ಜಾನಪದವನ್ನು ಇವತ್ತು ಬೇರೆ ದೃಷ್ಟಿಯಿಂದ ನೋಡ್ತಾ ಇದ್ದೇವೆ. ಅಲ್ಲಿ ಬಂಡಾಯ ಇದೆ ಅಂತಾ ಇವತ್ತು ನೋಡ್ತೇವೆ. ಒಂದೊಂದು ಕಾಲಕ್ಕೆ ಹಾಗೆ ಸಮಾಧಾನ ಮಾಡಿಕೊಳ್ತೇವೆ. ನಾನು ಹೇಳುವುದು ಜಾನಪದದಲ್ಲಿ ಬಂಡಾಯ ಇಲ್ಲ. ಅಂದಾಗ ಪ್ರಾಮುಖ್ಯ ಇಲ್ಲ ಅಂತ ಅಲ್ಲ. ಜನತೆ ಇದ್ದುದನ್ನು ಒಪ್ಪಿಕೊಂಡು ಬರೆದಿದ್ದಾರೆ. ಮಳೆ ಬರೆದಿದ್ದಾಗ ದೇವರನ್ನು ಕೋರುವ ಪ್ರಾರ್ಥನೆ ಮಾಡಿದ್ದಾರೆ.

ನಾನು ಸಧ್ಯ ಯಕ್ಷಗಾನಕ್ಕೂ ಜನಪದ ಅಂತ ಕರೆಯೋದಿಲ್ಲ. ಜನ form ನೋಡಲ್ಲ. ಅವರಿಗೆ ಬೇಕಾದ್ದು ಮನರಂಜನೆ ಮಾತ್ರ. ವಿಜಾಪುರದಲ್ಲಿ ಡಬ್ಬಿ ನಾಟಗಳು ತಿಂಗಳುಗಟ್ಲೆ ಯಾಕೆ ಓಡ್ತವೆ. ಅದಕ್ಕೆ ಪ್ರೇಕ್ಷಕರನ್ನು ಹಿಡಿಯುವ ಶಕ್ತಿ ಇದೆ. ಆದರೆ ಇದನ್ನು ಯಾವ ರೀತಿ ಜನತೆಯ ಸಮೀಪಕ್ಕೆ ತಗೆದುಕೊಂಡು ಹೋಗಬೇಕೆನ್ನುವುದು ನಮ್ಮ ಪ್ರಶ್ನೆ.

ಶಿಷ್ಯಪ್ರಜ್ಞೆ (ವೈದಿಕಪ್ರಜ್ಞೆ) ಜನ ಮೂಕವಾಗಿ ಒಪ್ಪಿಕೊಂಡಿದ್ದಾರೆ. ವೇದಾಂತವನ್ನೇ ಜೀವ ವೃತ್ತಿಯಾಗಿ ಮಾಡಿಕೊಂಡವರು ಇದ್ದಾರೆ.

ಕ್ರಾಂತಿ ನಮಗೊಂದು fashion ಆಗಿದೆ. ಹೊಸ ತಂತ್ರಗಳ ಮೂಲಕ ಹೋದದ್ದನ್ನು ಹಳ್ಳಿ ಜನ ಅಷ್ಟು ತೀಷ್ಣವಾಗಿ ಸ್ವೀಕರಿಸುವುದಿಲ್ಲ. (ಕುಟುಂಬ ಯೋಜನೆ ಹಾಡು appealing ಇದೆ. ಗೀ ಗೀ ಪದಕ್ಷೀಣವಾಗುತ್ತಿರುವಾಗ ಗೀಗೀ ಪದ ಬೇಡ) ಹಳ್ಳಿಯಲ್ಲೇ ಇರುವ ಎಲ್ಲ ಮಾಧ್ಯಮಗಳನ್ನು ಶಕ್ತಿಶಾಲಿಯಾಗಿ ಬಳಸಿಕೊಳ್ಳಬೇಕು.

## ಮೂರನೆಯ ರಂಗಭೂಮಿ

—ಗುಡಿಹಳ್ಳಿ ನಾಗರಾಜ

"ಇಪ್ಪತ್ತನೆಯ ಶತಮಾನದಲ್ಲಿ ಹೊಸ ಪ್ರೇಕ್ಷಕನೊಬ್ಬನ ಉದಯವಾಗಿದೆ. ವಿಮೋಚನೆಗಾಗಿ ಹೋರಾಡುತ್ತಿರುವ ರೈತರು ಹಾಗೂ ಕಾರ್ಮಿಕರು ಆ ಹೊಸ

ಪ್ರೇಕ್ಷಕರು. ಇಲ್ಲಿಯವರೆಗೂ ಕುದುರೆ ಗಾಡಿಗಳಲ್ಲಿ ಮಕಮಲ್ ಬಟ್ಟೆ ತೊಟ್ಟು ನಾಟಕ ನೋಡಲಿಕ್ಕಾಗಿ ಬರುವವರಿಗಾಗಿ 'ಕಣ್ಣೀರು ಮಿಡಿಸುವ' ನಾಟಕಗಳ ನ್ನಾಡಿದಿರಿ. ಆದರೆ ಹೊಸ ಪ್ರೇಕ್ಷಕನಿಗೆ ಕಣ್ಣೀರು ಮಿಡಿಯುತ್ತ ನಿಟ್ಟುಸಿರು ಬಿಡುತ್ತ ಕೂಡುವುದು ಬೇಕಿಲ್ಲ. ಆತನಿಗೆ ಬರೆಯುವ ನಾಟಕಗಳು ಬೇರೆಯಾಗ ಬೇಕು, ಬರೆಯುವ ರೀತಿ ಬೇರೆಯಾಗಬೇಕು".

ಬ್ರೆಕ್ಟ್ ಹೇಳುವ ಈ ಹೊಸ ನಾಟಕ, ಹೊಸ ಪ್ರೇಕ್ಷಕನನ್ನು ತಲುಪಬೇಕಾದಲ್ಲಿ ಸಾಂಪ್ರದಾಯಿಕ ರಂಗಭೂಮಿಯ ಸಮರ್ಥ ಉಪಯೋಗದ ಜತೆ ಹೊಸ ರಂಗ ಭೂಮಿಯ ಆವಿಷ್ಕಾರವೂ ಆಗಬೇಕಿದೆ. ಅದೇ ಮೂರನೆಯ ರಂಗಭೂಮಿ. ಜನತೆಯ ಸಮಸ್ಯೆಗಳನ್ನು ಜನರ ಮಧ್ಯೆ ಕಲಾತ್ಮಕವಾಗಿ ಸ್ಪಂದಿಸಲು ಇರುವ ಜೀವಂತ ಮಾಧ್ಯಮ ಈ ಮೂರನೆಯ ರಂಗಭೂಮಿ. ಜನತೆ ಬಯಸುವ ಬದಲಾವಣೆಗೆ ಅಭಿವ್ಯಕ್ತಿ ಕೊಡಲು ಈ ಮಾಧ್ಯಮದಿಂದ ಹೆಚ್ಚು ಸಾಧ್ಯತೆಗಳಿವೆ ಆರ್ಥಿಕ ಸಾಮಾಜಿಕ ರಂಗದಲ್ಲಿ ಮೂಲಭೂತ ಬದಲಾವಣೆಯಾಗದೆ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಾತ್ರ ನಿರೀಕ್ಷಿಸುವುದು ಅವೈಜ್ಞಾನಿಕ. ಆದರೆ ಬದಲಾವಣೆ ಹಲವು ನಿಟ್ಟಿನಲ್ಲಿ ನಡೆಯುತ್ತ ಸಮತೋಲನ ಕಾಯ್ದುಕೊಂಡು ಬೆಳವಣಿಗೆಯಾಗುತ್ತ ಹೋಗುತ್ತಿರಬೇಕು. ಸಮೂಹ ಚಳುವಳಿಯನ್ನು ಬೆಳೆಸುವ ಹೊಣೆ ಹೊತ್ತು ಕೊಂಡೇ ಸಾಂಸ್ಕೃತಿಕ ಕ್ಷೇತ್ರವನ್ನು ಸಮೃದ್ಧಿಗೊಳಿಸಬೇಕಿದೆ. ಸಮಾಜವಾದಿ ಸಮಾಜಕ್ಕಾಗಿ ಹೋರಾಡುತ್ತಿರುವಾಗ ಅದು ಒಂದು ಹೋರಾಟಕ್ಕೇ ದಕ್ಕುವ ಸ್ಥಿತಿಯಲ್ಲ. ಸಿಕ್ಕಮೇಲೂ ಅದನ್ನು ದಕ್ಕಿಸಿಕೊಳ್ಳಲು ನಡೆಸುವ ಪ್ರಜ್ಞಾಪೂರ್ವಕ ಪ್ರಯತ್ನವೇ ಸಾಂಸ್ಕೃತಿಕ ಕ್ರಾಂತಿ.

ರಂಗಭೂಮಿಯು ಒಂದು ಪ್ರದರ್ಶನ ಕಲೆ. ಆದ್ದರಿಂದ ರಂಗಭೂಮಿಯ ಬೆಳವಣಿಗೆಯ ಬಗ್ಗೆ ಯೋಚಿಸುವಾಗ ಬರೇ ನಾಟಕದ ಬೆಳವಣಿಗೆ, ಪ್ರಯೋಗ ಗಳು, ನಟನೆ, ರಂಗಸಜ್ಜಿಕೆ ಇವುಗಳ ಬಗ್ಗೆ ಚಿಂತಿಸಿ ರಂಗಭೂಮಿಯ ಬಗ್ಗೆ ನಿರ್ಣಯ ಕೊಡುವುದು ತಪ್ಪಾಗುತ್ತದೆ. ರಂಗಭೂಮಿಯ ಬಗ್ಗೆ ಯೋಚಿಸುವಾಗ ಈ ಎಲ್ಲಾ ಅಂಶಗಳ ಕಡೆ ಗಮನ ಕೊಡಬೇಕಾಗುತ್ತದೆ.

ಮೂರನೆಯ ರಂಗಭೂಮಿ ನಮಗೆ ತುಂಬಾ relevant ಕಾರಣ: ಜನತೆಯ ನಡುವೆ ಈ ನಾಟಕ ಮಾಡುತ್ತಿರುವುದೇ ಜನತೆಯ ಹತ್ತಿರಕ್ಕೆ ಹೋಗುತ್ತಿರುವುದಕ್ಕೆ ಸಾಕ್ಷಿ. ಅವರ ಕ್ರಿಯೆ, ಪ್ರತಿಕ್ರಿಯೆಗೆ ಇಲ್ಲಿ ನೇರವಾದ ಕಲಾತ್ಮಕ ಸ್ಪಂದನ ಇದೆ. ಮನುಷ್ಯ ಇದ್ದಾನೆ ಅವನಲ್ಲಿ ಸಾಮರ್ಥ ಇದೆ ಎನ್ನುವುದನ್ನು identify ಮಾಡಲು ಇಲ್ಲಿ ಸಾಧ್ಯ. ಪ್ರೇಕ್ಷಕ ತನ್ನ ಕಲ್ಪನೆಗೆ kick ಕೊಡುವುದರಲ್ಲೇ ತೃಪ್ತಿಪಟ್ಟು ಕೊಳ್ಳುವ ವ್ಯಾಪಾರಿ, ಪಲಾಯನವಾದಿ ಕಲೆಯಿಂದ ತುಂಬಾ ದೂರವಾದುದು.

ಇದು. ಚಲನಚಿತ್ರದ ಜತೆ ಇರುವ ವಿಷಯ ಸ್ಪರ್ಧೆಯನ್ನು ಈ ರಂಗಭೂಮಿಯ ಅಭಿವೃದ್ಧಿಯಿಂದ ತಪ್ಪಿಸಲು ಸಾಧ್ಯಇದೆ. ಗೆರಿಲ್ಲಾ ರೀತಿಯ ಹೋರಾಟದ ಅಂಗ ವಾಗಿ ಇದ್ದ 'ಅಜಿತ್‌ಪ್ರಾಪ್, ತಮಾಷಾ, ಜಾತ್ರಾ, ನೌಟಂಕಿ, ಭವಾಯಿ, ರಾಮಲೀಲಾ, ಬುರ್ರಕಥಾ, ಜನನಾಟ್ಯಮಂಚ, IPTA, ಬಹುರೂಪಿಯ ಅನುಭವಗಳ ನಮ್ಮ ಅನುಭವಗಳನ್ನು ಸಮೃದ್ಧಿಗೊಳಿಸಬಹುದು. ಬುರ್ರ ಕಥ ತೆಲಗಿನ ಜಾನಪದ ರಂಗಭೂಮಿಯಾಗಿದೆ.

ಇಷ್ಟೆಲ್ಲ ಇದ್ದು ಮೂರನೇ ರಂಗಭೂಮಿ ಹವ್ಯಾಸಿಯಾಗುವುದು ಬೇಡ ವೃತ್ತಿಯೂ ಅಲ್ಲ. ಆದರೆ ಕಲಾಕಾರ ಪೂರ್ಣಾವಧಿಯಲ್ಲಿ ಕಮಿಟ್ ಆಗಬೇಕಾದ ಅವಶ್ಯಕತೆ ಇದೆ. ಅದಕ್ಕಾಗಿ ಹೊಸ ರಂಗಭೂಮಿಗೆ ಸ್ಪಷ್ಟವಾದ ತಾತ್ವಿಕ ನಿಲುವು, ವ್ಯವಸ್ಥಿವಾದ ಸಂಘಟನೆ ಅವಶ್ಯವಾಗಿ ಬೇಕಿದೆ.

## ಪ್ರಸ್ತುತ ಪರಿಸ್ಥಿತಿಯಲ್ಲಿ ಸಮೂಹ ಮಾಧ್ಯಮಗಳು

—ಎ. ಜಿ. ಶರಣಕುಮಾರ

ಬದಲಾಗುತ್ತಿರುವ ಸಮಾಜದಲ್ಲಿ ಆಯಾ ಪರಿಸ್ಥಿತಿಯನ್ನು ಅನುಸರಿಸಿ ಮಾಧ್ಯಮ ಕೂಡಾ ಬದಲಾಗ್ತ ಬಂದಿದೆ. ಎಲ್ಲ ಸಮೂಹ ಮಾಧ್ಯಮಗಳಲ್ಲಿ ರಂಗಭೂಮಿ ಅತಿ ಪುರಾತನವಾದುದು. ಮೊದಮೊದಲು ಉಲ್ಲಾಸಕ್ಕಾಗಿ ಬೆಳೆದು ಬಂದ ರಂಗಭೂಮಿ ಇಂದು ಬದ್ಧತೆಯಿಂದ ಬೆಳೆಯುತ್ತಿದೆ. ಈ ದಾರಿಯಲ್ಲಿ ಜನಮ, ನಾಟಕ ತಂಡದಂತವು, ಬಾದಲ್ ಸರ್ಕಾರವರಂತ ತಂತ್ರಗಳನ್ನೊಳಗೊಂಡ ನಾಟಕಗಳು ಹಳ್ಳಿಹಳ್ಳಿಗೆ ಮುಟ್ಟಬೇಕಿದೆ.

## ಮಾನವೀಯ ಕಳಕಳಿ

—ಎಂ. ಪಿ. ಪ್ರಕಾಶ್

ಅಸಮಾನ ವ್ಯವಸ್ಥೆ ಹೃದಯ ಹೀನವಾಗಿರುತ್ತದೆ. ಮಿಶ್ರ ಮೌಲ್ಯಗಳಿರುವ ಇಲ್ಲಿ ಜೀವನಕ್ಕೆ ಸರಿಯಾದ ಬದ್ಧತೆ ಇಲ್ಲ. ಮಾನವೀಯ ಕಳಕಳಿಯ ಬದ್ಧತೆ ತುಂಬಾ ಮುಖ್ಯವಾದುದು. ನಾವು ನಾಟಕಗಳನ್ನು ಜನತೆಗೆ ಹೇಳುವ ವಿಧಾನ ಗಳೂ ಎಷ್ಟು ಪರಿಣಾಮಕಾರಿಯಾಗಿವೆ ಎನ್ನುವುದೂ ಕೂಡಾ ತುಂಬಾ ಮುಖ್ಯ ವಾದುದು. 'ಬೆಲ್ಚಿ' ಕಲೆಯ ಎಲ್ಲ form ಉಪಯೋಗಿಸಿಕೊಂಡಿದ್ದರಿಂದ ತುಂಬಾ ಕಲಾತ್ಮಕವಾದ ನಾಟಕವಾಯ್ತು. ಆದರೆ ಅದೇ 'ನರಗುಂದ ಬಂಡಾಯ' ಯಾಕೆ ಅಷ್ಟು ಕಲಾತ್ಮಕ ಆಗಿ ಕಾಣಲಿಲ್ಲ. ಇದು ನಮ್ಮ ನಡುವಿನ ಸಮಸ್ಯೆ:

ಬಯಲಾಟದಲ್ಲಿ ಕ್ರಾಂತಿಕಾರಕ ವಿಚಾರ ಇರುವುದಿಲ್ಲ. ಆದರೆ ಸಣ್ಣಾಟದಲ್ಲಿ ಸಾಧ್ಯ. ಯಾಕೆಂದರೆ ಸಣ್ಣಾಟ ಕೂಡ ಕ್ರಾಂತಿಕಾರವಾದದ್ದೇ.

ಆದ್ದರಿಂದ ಜನಪದದ ಎಲ್ಲ ಸಾಧ್ಯತೆಗಳ್ನ ಸಮರ್ಥವಾಗಿ ಉಪಯೋಗಿಸಿಕೊಂಡು ಜನತೆಯ ಸಮೀಪ ಹೆಚ್ಚು ಹೋಗಬೇಕಿದೆ.

## ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಹರಡುವತ್ತ ಸಮೂಹ ಮಾಧ್ಯಮಗಳು

—ಡಿ. ಉಲ್ಲಾಸ್

ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಹರಡುವಲ್ಲಿ ಸಮೂಹ ಮಾಧ್ಯಮಗಳು ಎಷ್ಟರಮಟ್ಟಿಗೆ ಸಫಲಹೊಂದಿವೆ, ವಿಫಲವಾಗಿವೆ ಎನ್ನುವುದೆಲ್ಲ ಪರಿಗಣಿಸಿ ಮುಂದೆ ಸಾಧ್ಯತೆಗಳೇನು ? ಎನ್ನುವ ಕಡೆ ನೋಡಬೇಕಿದೆ. ಭಾರತೀಯ ಸಂದರ್ಭದಲ್ಲಿ ರೇಡಿಯೋ, ಟಿ. ವಿ, ಸರಕಾರಿ ಸೌಮ್ಯದಲ್ಲಿರುವುದರಿಂದ ಅವರೆಡನ್ನು ಸಂಪೂರ್ಣವಾಗಿ ಬಿಟ್ಟುಕೊಡಬೇಕು. ಜನತೆ ಉದಾಸೀನ ಮಾಡಬೇಕು. ಪ್ರಜಾಪ್ರಭುತ್ವ ಎಂದು ಹೇಳಿಕೊಳ್ಳುತ್ತಿದ್ದರೂ ಸಮಾನತೆ ಕಾಣ್ತಾ ಇಲ್ಲ, ಹೀಗಾಗಬೇಕಾದರೆ ವ್ಯವಸ್ಥೆ ಬದಲಾವಣೆಯಾಗಬೇಕು. ರೇಡಿಯೋ, ಟಿ. ವಿ. ಯಿಂದ ಸಾಧ್ಯವಿಲ್ಲ.

ಸಿನಿಮಾ ಹೆಚ್ಚು ಮನರಂಜನೆ ಕೊಡುವ ಪ್ರಬಲ ಮಾಧ್ಯಮ. ತಮಿಳು ನಾಡಿನಲ್ಲಿ ದ್ರಾವಿಡ ಪಕ್ಷ ತರಲು ಕಾರಣ ಸಿನಿಮಾ. ಆದರೆ ಸಿನಿಮಾದಲ್ಲಿ ಯಾಕೆ ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ರೂಪಿಸಲಿಲ್ಲ. ಬಂಡವಾಳಶಾಹಿಗೆ ಇದು ಬೇಕಾಗಿಲ್ಲ. ಕೆಳವರ್ಗದವನು ಪ್ರತಿರೋಧ ಕಳ್ಕೊಂಡಾನೆ. ಇವನನ್ನು ವಿಕೃತವಾಗಿ ಶಮನಗೊಳಿಸಲು ಹೆಚ್ಚುಚ್ಚು ಫ್ಯಾಂಟಸಿ ಮಾಡ್ತಾರೆ. ಮರದ ಸುತ್ತ ಸುತ್ತುತ್ತ ಅಲ್ಪಸ್ವಲ್ಪ ಶಕ್ತಿಯನ್ನು ಕಳೆದುಕೊಳ್ತಾನೆ. "ಚೋಮನದುಡಿ," ಆಕ್ರೋಶ್‌ನಿಂದ ಹೊಸ ಧ್ವನಿ ಹುಟ್ಟಿಸಲು ಸಾಧ್ಯವಿಲ್ಲ. ಆದರೆ ಅಂಕುರ್, ಮೃಗಯಾದಂತಹ ಸಿನಿಮಾಗಳಿಂದ ಸಾಧ್ಯವಿದೆ.

ರಂಗಭೂಮಿ ತುಂಬಾ ಹಳೆಯ ಮಾಧ್ಯಮ. ಇಲ್ಲೂ ಕೂಡ ವೈಯುಕ್ತಿಕ ಆತ್ಮಶೋಧ, ಚಿಂತನೆ ಮಾತ್ರ ಮೀಸಲಾಗಿವೆ. ಸಾಮಾಜಿಕವಾಗಿ ಒಟ್ಟು ಪರಿಣಾಮ ಮಾಡಲು fail ಆಗಿವೆ. "ಹಯವದನ." "ಜೋಕುಮಾರಸ್ವಾಮಿ" "ಜೈಸಿದ ನಾಯ್ಕ" ಕೂಡ ಪ್ರತಿಗಾಮಿ ಮೌಲ್ಯಗಳನ್ನು ಬಿಂಬಿಸ್ತವೆ. ಇತ್ತೀಚಿನ ನಾಟಕಗಳು ಸಮುದಾಯ ನಾಟಕಗಳು ಮಾತ್ರ ಜನಸಾಮಾನ್ಯರನ್ನು ತಲುಪುತ್ತಾ ಇವೆ. ಆದರೂ ಯಾವುದೇ ನಾಟಕವಾದರೂ ಸಾಕ್ಷರತೆ ಕಡಿಮೆ ಇರುವುದರಿಂದ ತಲುಪಬೇಕಾದಲ್ಲಿ ಇನ್ನೂ ತಲುಪ್ತಾ ಇಲ್ಲ. ಅದಕ್ಕಾಗಿ ಸೂಕ್ಷ್ಮವಾದ ರೀತಿ ಬಿಟ್ಟು ಸರಳೀಕೃತವಾಗಿ ಜನರ ಹತ್ತಿರ ಹೋಗಬೇಕಾಗಿದೆ.

ಪತ್ರಿಕೆ ತುಂಬಾ ಸೀಮಿತವಾದುದು. ಇವು ಮಧ್ಯಮ ವರ್ಗದ ನೀತಿಸಂಹಿತೆ ಬಿಟ್ಟುಕೊಟ್ಟಿಲ್ಲ. ಮಧ್ಯಮವರ್ಗದ ಜನರನ್ನು ತೃಪ್ತಿಪಡಿಸುವ ಸಲುವಾಗಿ ಅನಿವಾರ್ಯವಾಗಿ ಪತ್ರಿಕೆಗಳು anti-govt. ಆಗಿವೆ. ಸಾಮಾಜಿಕ, ಆರ್ಥಿಕ ಪದ್ಧತಿ ಬದಲಾಗಬೇಕಾದರೆ ಪತ್ರಿಕೆಗಳು ಬಹಳ ಕೆಲಸ ಮಾಡಬೇಕಿದೆ. ಎಷ್ಟೇ ಕಷ್ಟದ ನಡುವೆಯೂ ಜನಪದ ಆಶಯಗಳನ್ನು ಮೂಡಿಸಲಿಕ್ಕೆ ಪ್ರಯತ್ನಿಸಬೇಕಿದೆ.

## ಜನಪದ ಸಂಸ್ಕೃತಿ ಮತ್ತು ಶಿಷ್ಟ ಸಂಸ್ಕೃತಿ

—ಶ್ರೀ ಎಸ್. ಎಸ್. ಹಿರೇಮಠ

ವಿಶಿಷ್ಟ ಜನಸಮುದಾಯದ ವಿಶಿಷ್ಟ ಕಾಲದ ಜನರ ಪ್ರಜ್ಞೆಯೇ ಸಂಸ್ಕೃತಿ. ಪ್ರಜ್ಞೆ ರೂಪುಗೊಳ್ಳೋದು ಪರಿಸರದಿಂದ ಆದರೆ ಪ್ರಜ್ಞೆಯಿಂದ ಪರಿಸರ ಅಲ್ಲ. ರಾಜಕೀಯ, ಆರ್ಥಿಕ, ಸಾಮಾಜಿಕ ಪ್ರಜ್ಞೆಯ ಒಟ್ಟು ಮೊತ್ತವೇ ಸಂಸ್ಕೃತಿ. ಇತಿಹಾಸವನ್ನು ನೋಡುವ ದೃಷ್ಟಿಕೋನ ಬೇರೆ ಬೇರೆ ಇದೆ. ಈ ದೃಷ್ಟಿಕೋನ ಜೀವನದ ಕಮಿಟ್‌ಮೆಂಟ್‌ನಿಂದ ಬರಬೇಕಿದೆ. ನಿಸ್ಸತ್ವವಾದ ಬದುಕು ಇಲ್ಲಿರೋದರಿಂದ ಭಾಷೆಯೂ ಸಿಸ್ಸತ್ವವಾಗಿ ಬರುತ್ತದೆ. ($E=Mc^2$) ಹೇಳುವ ಜನ ಗುಡಿಗೆ ಹೋಗ್ತಾರೆ. ಹೈಬ್ರೀಡ್ ಸಂಸ್ಕೃತಿ, ಹೈಬ್ರೀಡ್ ನಡುವಳಿಗಳನ್ನು ಕಲಿಸ್ತಾ ಇದೆ. ಯಜಮಾನ ಸಂಸ್ಕೃತಿಯಲ್ಲಿ ಜನಪದ ಅಂಶಗಳಿವೆ. ಜನಪದ ಸಂಸ್ಕೃತಿಯಲ್ಲಿ ಯಜಮಾನ ಸಂಸ್ಕೃತಿಯ ಅಂಶಗಳಿವೆ. ಇಂತಹ ಕೋಳುಕೊಡುಗೆ ಇದ್ದರೂ ಅಂತಸ್ಸತ್ವ ಬದಲಾಗದೆ ಹೊರ ರೂಪದಲ್ಲಿ ಮಾತ್ರ ಕೋಳುಕೊಡುಗೆ ನಡೀತಾ ಇದೆ.

ನಾವು ಹುಟ್ಟಿರುವ ವರ್ಗದಿಂದ ನಮ್ಮ ಸಂಸ್ಕೃತಿ ರೂಪುಗೊಳ್ಳುತ್ತದೆ, ಮಧ್ಯಮ ವರ್ಗದಲ್ಲಿ ಹುಟ್ಟಿದವರಿಗೆಲ್ಲ ಜನಪದ ಮನರಂಜನೆಯಾಗಿ ಕಾಣ್ತದೆ. ಬಂಡಾಯ ಎಲ್ಲ ಕಾಲಕ್ಕೂ ಮಿತಿ ಒಳಗಡೆ rebel ಆಗಿದೆ. ಬಂಡಾಯದ ಅಂತಸ್ಸತ್ವದಲ್ಲಿ ಪ್ರತಿಭಟನೆ ಇದೆ. ಬಂಡಾಯಕ್ಕೆ ಅರ್ಥವನ್ನು ಸಂಘಟನೆ ಹಿಗ್ಗಿಸ್ತಾ ಹೋಗ್ತದೆ. ಬಂಡಾಯದ ಪರಂಪರೆ ಮುಂದುವರಿಯುತ್ತದೆ.

---

* ಹೊಸಪೇಟೆಯಲ್ಲಿ ನಡೆದ ಬಳ್ಳಾರಿ ಜಿಲ್ಲಾ 'ಸಮುದಾಯ ನಾಟಕೋತ್ಸವ'ದ ಅಂಗವಾಗಿ ಏರ್ಪಡಿಸಿದ್ದ ವಿಚಾರಗೋಷ್ಠಿಯ ತುಣುಕುಗಳು.

ವರದಿ : ಜಿ. ನಾಗರಾಜ

# ಪಂಪಭಾರತದ ಮಂಗಲಪದ್ಯ

—ಎಸ್. ಎಸ್. ಹಿರೇಮಠ

---

ವಿಕ್ರಮಾರ್ಜುನ ವಿಜಯದ ಪ್ರಥಮ ಪದ್ಯದ ಬಗ್ಗೆ ಸಂಪ್ರದಾಯಿಕ ಉದಾರವಾದಿ ವಿಮರ್ಶಕರು (ಉದಾ : ಡಿ. ಎಲ್. ಎನ್. ಮುಳಿಯ ತಿಮ್ಮಪ್ಪಯ್ಯ, ಡಾ॥ ಎಂ.ಎಂ. ಕಲಬುರ್ಗಿ, ಸೀತಾರಾಂ ಜಾಗಿರದಾರ, ಹೇಮಲತ ಪದಕಿ, ರಂ ಶ್ರೀ ಮುಗಳಿ ಮತ್ತು 1977ರ ಕರ್ನಾಟಕ ಭಾರತೀಯ (9–3), ನಾನು, ಮುಂತಾದವರು) ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ನಮ್ಮ ಚಾರಿತ್ರಿಕ ಭೌತವಾದಿ ವಿಶ್ಲೇಷಣೆಗೆ ಅವರ ಹಲವಾರು ಸಂಗತಿಗಳು ನೆರವಾಗುತ್ತವೆಂಬುದನ್ನು ಗಮನಿಸಬೇಕು. ಆದರೆ ಅವರ ಇತಿಮಿತಿಗಳನ್ನು ದೃಷ್ಟಿಭೇದವನ್ನು ಗುರುತಿಸಬೇಕಾಗುತ್ತದೆ. ನನ್ನ ತಿಳುವಳಿಕೆಯ ಚಾರಿತ್ರಿಕ ಭೌತಿವಾದಿ ದೃಷ್ಟಿಕೋನದಿಂದ ಈ ಪದ್ಯದ ವಿಶಿಷ್ಟ ಭಿನ್ನವಾದ ಆಯಾಮಗಳ ಕಡೆ ಗಮನ ಸೆಳೆಯಲು ಈ ಅಲ್ಪ ಪ್ರಯತ್ನ ಮಾಡುತ್ತಿರುವೆ. "ಮಾರ್ಕ್ಸ್‌ವಾದಿ ವಿಮರ್ಶಾ ವಿಧಾನವು ವಿಮರ್ಶೆಯ ಸಾಹಿತ್ಯಕ ಅಂಶವನ್ನು ಅತ್ಯವಶ್ಯ ಎಂದು ಪರಿಗಣಿಸಿದರೂ ಸಾಮಾಜಿಕ ವಿಶ್ಲೇಷಣೆಯು ಅದಕ್ಕಿಂತ ಹೆಚ್ಚು ಮೂಲಭೂತವಾದ ಆಸಕ್ತಿ"—(ಒಡನಾಡಿ 7—8. ಪು 135).

ಪಂಪ ಭಾರತದ ಮೊದಲನೆ ಗದ್ಯದ (ಮಂಗಲಪದ್ಯ) (ಆಶೀಪದ್ಯ) ಸರಳಾನುವಾದ ಹೀಗಿದೆ—

ಜಯಲಕ್ಷ್ಮಿಯನ್ನು (ಲಕ್ಷ್ಮಿಯನ್ನು ಸಮುದ್ರ ಮಂಥನದ ಕಾಲದಲ್ಲಿ ನಾರಾಯಣ ಅನಾಯಾಸ ಪಡೆದಂತೆ, ಪಡೆಯದೆ) ಶತ್ರುಗಳ ಸೈನ್ಯವೆಂಬ ಸಮುದ್ರದಲ್ಲಿ ಪಡೆದು ; ಭೂಮಿಯನ್ನು ಜೀಯ ಎಂದು (ಬಲಿಚಕ್ರವರ್ತಿ ಎದುರು ವಾಮನಾವತಾರದಲ್ಲಿಯಂತೆ) ಯಾಚಿಸಿಕೊಳ್ಳದೆ ಶತ್ರುರಾಜರನ್ನು ಒತ್ತಿ ತೆಗೆದುಕೊಂಡು, ತನ್ನ ಒಳ್ಳೆಯ ಹೂವಿನಂತಿರುವ ದೃಷ್ಟಿಯನ್ನು (ಕಮಲಾಕ್ಷನಂತಲ್ಲ.) ಒಪ್ಪುವಂತೆ ತಾಳಿಯೂ, ಹೀಗೆ ಉದಾತ್ತನಾರಾಯಣನಾದ ದೇವನಾದ ಅರಿಕೇಸರಿ (ಚಾಲುಕ್ಯ ಮಾಂಡಲಿಕ ದೊರೆ, ಪಂಪನ ಆಶ್ರಯದಾತ) ನಮಗೆ ಸೌಖ್ಯ ಕೋಟಿಯನ್ನು ಕೊಡಲಿ. [ಈ ಪದ್ಯದಲ್ಲಿ ಬರುವ 'ಸುಪುಷ್ಪದೃಷ್ಟಿ'

(ಪಟ್ಟ) (ದೃಷ್ಟಿ)ಯು ಬಗ್ಗೆ ಮೇಲೆ ತಿಳಿಸಿದ ವಿಮರ್ಶಕರು ಸಾಕಷ್ಟು ತಲೆಕೆಡಿಸಿ ಕೊಂಡಿದ್ದಾರೆ.] [ಸಂಶೋಧನೆಯಲ್ಲಿ ಇಂಥದು ರಂಜಕ ಹವ್ಯಾಸವೂ ಆಗಿತ್ತು, ಆಗಿದೆ].

10ನೇ ಶತಮಾನದ ಕನ್ನಡನಾಡಿನ, ಸಾಮಾಜಿಕ ರಾಜಕೀಯ ವಿದ್ಯಮಾನ ಗಳ ಚಾರಿತ್ರಿಕ ವಿಶ್ಲೇಷಣೆಯು ಆ ಕಾಲದ ಕವಿಗಳ, ಕಾವ್ಯಗಳ ಅಭ್ಯಾಸಕ್ಕೆ ಅಗತ್ಯವಾಗಿರುತ್ತದೆ. ಈ ಬಗ್ಗೆ ಸ್ಪಷ್ಟವಾಗಿ ಎರಡು ದೃಷ್ಟಿಕೋನಗಳು ಈಗಾಗಲೇ ಕನ್ನಡ ಸಾಹಿತ್ಯ ವಿಮರ್ಶಾ ಕ್ಷೇತ್ರದಲ್ಲೂ ಕಾಲಿಟ್ಟಿವೆ. [ಭೌತವಾದಿ ದೃಷ್ಟಿ ಕೋನಕ್ಕೆ ಜಿ. ರಾಜಶೇಖರ, ಯು.ಆರ್.ಅ. ಬರಗೂರು ರಾಮಚಂದ್ರಪ್ಪ, ಸಿದ್ಧ ಲಿಂಗಯ್ಯ, ರಾಮಚಂದ್ರದೇವ, ಚಂಪಾ, ವೀರಣ್ಣ, ಕಿರಂ ನಾಗರಾಜ, ಜಿ. ರಾಮ ಕೃಷ್ಣ, ಶೂದ್ರ ಶ್ರೀನಿವಾಸ ಮುಂತಾದವರ ಲೇಖನ ಪತ್ರಿಕೆ, ಗ್ರಂಥಗಳನ್ನು ನೋಡ ಬೇಕು.] ಉದಾರವಾದಿ ವಿಮರ್ಶಕರಿಗೂ, ಭೌತವಾದಿ ವಿಶ್ಲೇಷಕರಿಗೂ ಇಲ್ಲಿ ಸ್ಪಷ್ಟವಾದ ಭಿನ್ನತೆಗಳು ನೆಲೆಗೊಳ್ಳುತ್ತಿವೆ.

'ಶ್ರೀ'ಯಿಂದ ಪಂಪನ ಆಶೀಪದ್ಯ ಶುರುವಾಗುತ್ತದೆ. ಶ್ರೀಗೆ ಸಂಪತ್ತು, ಲಕ್ಷ್ಮಿ ಎಂಬ ಎರಡೂ ಅರ್ಥಗಳು ಇಲ್ಲಿ ಕ್ರಮವಾಗಿ ಅರಿಕೇಸರಿಗೂ ನಾರಾಯಣ ನಿಗೂ ಅನ್ವಯಿಸುತ್ತದೆ. ಸಮುದ್ರ ಮಥನದಲ್ಲಿ ಅನಾಯಾಸವಾಗಿ ವಿಷ್ಣು ಲಕ್ಷ್ಮಿಯನ್ನು ಪಡೆದದ್ದು ಪುರಾಣಕಾಲದ ಕಲ್ಪನೆ. ಸಂಪತ್ತಿನ ಅಧಿದೇವತೆ ಲಕ್ಷ್ಮಿ ಎಂದು ಪರಂಪರೆಯ ನಂಬಿಕೆ ಇದೆ. ಹೇಗಿದ್ದರೂ ಸಂಪತ್ತಿನ ದೇವತೆ ಲಕ್ಷ್ಮಿ ನಾರಾಯಣನ ಸೊತ್ತಾದವಳು. ನಾರಾಯಣ ಕಲ್ಪನೆಯ ಕಾಲದ ಆ ಮುಖ್ಯಕ್ಕೆ (ಅನಾಯಾಸ ಸ್ವೀಕರಿಸುವುದು) ೧೦ನೇಶತ ಕನ್ನಡನಾಡಿನ ಪಂಪ ಪ್ರತಿಕ್ರಮಿಸುವ ರೀತಿ ಭಿನ್ನವಾದುದು. ವೈರಿ ಸೈನ್ಯ ಸಾಗರದಲ್ಲಿ ಸಂಪತ್ತನ್ನು ಪಡೆದವ ಅರಿಕೇಸರಿ, ಇದು ಕವಿಗೆ ಪ್ರಸ್ತುತವಾಸ್ತವಾಂಶ. ಹೋರಾಟದಿಂದ ಗಳಿಸುವುದು (ಇದಕ್ಕೆ ಅರ್ಥ ಬೇರೆ ಆಗುತ್ತೆ; ಮುಂದೆ ನೋಡಿ) ಪಂಪನ ಕಾಲದ, ಸ್ವಾಭಿಮಾನದ, ವೀರಗುಣದ, ಸಾಹಸದ ಕೆಲಸವಾಗಿತ್ತು. ಐತಿಹಾಸಿಕ ವಾಸ್ತವವಾಗಿತ್ತು—ಇದೇ ಮುಖ್ಯವೂ ಆಗಿತ್ತು. [ಯಾರ ಮೌಲ್ಯ? ರಾಜರ (ಶೋಷಕರ) ಮೌಲ್ಯ] ವೀರಕ್ಕೆ, ಆದಟಿಗೆ, ಪರಾಕ್ರಮಕ್ಕೆ, ಶೌರ್ಯಕ್ಕೆ, ಹೋರಾಟಕ್ಕೆ ಜಯಕ್ಕೆ ಈ ಕಾವ್ಯದಲ್ಲಿ ಪ್ರಮುಖವಾದ ಸ್ಥಾನವಿದೆ ಎಂಬುದನ್ನು ಹೆಜ್ಜೆ ಹೆಜ್ಜೆಗೂ ತಿಳಿಯುತ್ತೇವೆ. ಶೋಷಕ ಅರಸರಿಗೆ (ಕ್ಷತ್ರಿಯರಿಗೆ) ತಮ್ಮ ವೈಭವ ಅಟ್ಟಹಾಸ, ಪ್ರತಿಷ್ಠೆ, ಸುಖಗಳಿಗೆ ಇದುವೆ ಆಧಾರವಾಗಿತ್ತು. ರಾಜ ಹೋರಾಟ ದಿಂದ ಗಳಿಸಿದ ಎಂಬ ಮಾತಿನಲ್ಲಿಯೇ ಏಕವಚನಕ್ಕೆ ಯಾವ ಅರ್ಥವೂ ಇಲ್ಲ. ಇದು ನಮಗೆ ಕಲಿಸುತ್ತ ಬಂದ ಇತಿಹಾಸದ ದೋಷ ಪರಂಪರೆ. ಶೋಷಕ

ರಾಜ ನೂರಾರು, ಸಾವಿರಾರು ಸೈನಿಕರಿಂದ, ಅಂಥದೇ ಸೈನಿಕರ (ಇವರೆಲ್ಲ ದುಡಿಯುವ ಸಾಮಾನ್ಯ ಜನ) ಮಧ್ಯೆಯು ಇನ್ನೊಬ್ಬ ರಾಜನನ್ನು ಕೊಂದು, "ಒತ್ತಿ" ಗಳಿಸಿದ ಎಂಬುದು ಇದೆಲ್ಲದರ ವಾಚ್ಯಾರ್ಥ. [ವಾಚ್ಯಗಳನ್ನೆಲ್ಲ ಲಕ್ಷ್ಯ ವ್ಯಂಗ್ಯ, ಮಾಡುವುದೇ ನಮ್ಮ ಶೋಷಕರಿಂದ ಪೋಷಿತ ಕವಿಗಳ 'ಕರ್ಮ'ವಾಗಿತ್ತು.] ಯುದ್ಧಗಳೇಕಾಗುತ್ತಿದ್ದವೆಂಬುದನ್ನು, ಒಂದು ದೊಡ್ಡ ಯುದ್ಧದಲ್ಲಿ ಅನೇಕ ರಾಜ ಮಾಂಡಲಿಕರೆಲ್ಲ ಏಕೆ ಸೇರುತ್ತಿದ್ದರೆಂಬುದನ್ನು, ಪಂಪನೇ 9-95ರ ವಚನದಲ್ಲಿ ಹೀಗೆ ಹೇಳುತ್ತಾನೆ: "ಹಗೆತನಕ್ಕೆ, ಧರ್ಮಕ್ಕೆ, ತಿರಸ್ಕಾರಕ್ಕೆ, ಹಳೆಯತನಕ್ಕೆ, ತಪ್ಪುಕಾಣಿಕೆಗೆ, ಲಾಭ ಪಡೆದುದಕ್ಕೆ, ದೌತ್ಯಕ್ಕೆ, ವಿವಾಹ ಸಂಬಂಧಕ್ಕೆ, ಸ್ನೇಹಕ್ಕೆ, ಮೇರೆಗೆ, ಸ್ವಾಮಿ-ಸೇವಕ ಸಂಬಂಧಕ್ಕೆ, ಭುಜಬಲದ ತೀಟೆಗೆ, ಮಹಿಮೆಗೆ, ಮೋಕ್ಷಕ್ಕೆ ಹೀಗೆ ಮಹಾಸಮುದ್ರದಲ್ಲಿ ಮಹಾನದಿಗಳು ಕೂಡುವಂತೆ ("ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು" —ಮತ್ತೊಂದು ಭಿನ್ನಸಂದರ್ಭದ ಸಾಲುಗಳು) ಸೇರುತ್ತಿದ್ದರಂತೆ.

ಈ ಪ್ರಾದೇಶಿಕ ಹೋರಾಟಗಳು, ಹೊಡೆದಾಟಗಳು ವಿಪರೀತವಾಗಿದ್ದ ಆ ಕಾಲದ ದಕ್ಷಿಣದ ಬಗ್ಗೆ ಇಂಡಿಯದ ಉನ್ನತ ಮಟ್ಟದ ಇತಿಹಾಸಕಾರ್ತಿ ರೋಮಿಲ ಥಾಪರ್ ತನ್ನ "A History of India" ಕ್ರಿ. ಶ. 800-1200ರವರೆಗಿನ ಪ್ರಾದೇಶಿಕ ರಾಜ್ಯಗಳ ಫ್ಯೂಡಲ್ ವ್ಯವಸ್ಥೆಯ ಬಗ್ಗೆ ಬರೆಯುತ್ತ ದೊಡ್ಡ ಸಾಮ್ರಾಜ್ಯಗಳು ಒಡೆದು ತುಂಡಾಗಿ ಪ್ರಾಂತೀಯ ರಾಜರು, ಇವರ ಬಗ್ಗೆ ಪ್ರಾಂತೀಯ ಸ್ವಾಮಿನಿಷ್ಠೆ, ಪ್ರಾದೇಶಿಕ ಆಸಕ್ತಿ ಬೆಳೆದು, ಇಂಥ ರಾಜರ ಚರಿತ್ರೆಗಳು, ಕಾವ್ಯಗಳು ಹುಟ್ಟಿದವೆಂದು ಬರೆದು, "A King did not have to be of the status of Samudragupta to become the subject of eulogy, minor Kings being described with the same enthusiasm as important monarchs. The proces of providing impressive geneologies led to associating fairly insignificant dynasties with historical personolities of the past or even with the very gods themselves" (ಪುಟ 241) ಎನ್ನುತ್ತಾಳೆ. ಅಧಿಕಾರ, ಸಂಪತ್ತು, ನಿರ್ದಿಷ್ಟ ವ್ಯಕ್ತಿಗಳನ್ನು ರಾಜಪದವಿಗೇರಿಸಲು, ಅಸಂಖ್ಯ ಜನರನ್ನು ನಾನಾ ರೀತಿಯಿಂದ ಸುಲಿಯುವ ಕ್ರೂರ ಪದ್ಧತಿಗಳಿಗಾಗಿ ಆಗಲೇ ಒಂದು ವ್ಯವಸ್ಥಿತವಾದ, ಪ್ರಶ್ನಾತೀತವಾದ, ಕಾನೂನುಬದ್ಧ, ಧರ್ಮಬದ್ಧ (ರಾಜಾ ಪ್ರತ್ಯಕ್ಷ ದೇವತಾ) ಪವಿತ್ರವಾದ (?) ಸಾಮಾಜಿಕ ವ್ಯವಸ್ಥೆಯೇ ಆಗಿಹೋದಂಥ ಕಾಲವದು. ಈಗ ಇದನ್ನೆಲ್ಲ ಅರಿಯಲು

ನಮಗೆ ಸಾಧ್ಯವಿದೆ ಮತ್ತು ಐತಿಹಾಸಿಕವಾಗಿ ಆ ಎಲ್ಲ ಸರ್ವಾಧಿಕಾರಿ ವ್ಯವಸ್ಥೆಯನ್ನು ನಾಶಮಾಡಲಾಗಿದೆ. (ಮನಸ್ಸಿನಿಂದ? "ಮನಸ್ಸು ಮತ್ತು ಪರಿಸ್ಥಿತಿ ಒಂದಕ್ಕೊಂದು ಬದ್ಧವಾದ್ದರಿಂದ ಪರಂಪರಾಗತವಾದ ಯೋಚನಾಲಹರಿ ನಮ್ಮಲ್ಲಿ ಇರುವುದಕ್ಕೂ ಸಮಾಜವ್ಯವಸ್ಥೆ ಇನ್ನೂ ಏಕಪ್ರಭುತ್ವಾಧಿಕಾರದ ಅಂಶಗಳನ್ನು ಒಳಗೊಂಡಿರುವುದಕ್ಕೂ ಸಂಬಂಧವಿದೆ" —ರಾಮಚಂದ್ರದೇವ). ಈ ಶೋಷಿತ ಸಂಪತ್ತನ್ನೇ ವ್ಯವಸ್ಥೆಯ ಹಿತರಕ್ಷಕ ಬುದ್ಧಿಜೀವಿ ವರ್ಗ — ಮಹಿಳೆಯನ್ನು ಮಾಡಿ — ಸುಂದರ ದೇವತೆಯನ್ನು (ಲಕ್ಷ್ಮಿ) ಮಾಡಿ ಭೋಗಕ್ಕೆ ಅಂಟಿಸಿರುವರು ; ಆರಾಧಿಸಿರುವರು. ಈ ಕ್ರೂರ ವಿಕಟ ವಿಧಾನದ ಅಡಿಪಾಯದಲ್ಲಿ, ಅದೇ ಭೌತಿಕ ನೈಜ ಸಂಪತ್ತಿನ ಭೌತಿಕ ಉತ್ಪಾದಕರಾದ ದುಡಿಯುವ ಜನವರ್ಗವನ್ನು ಪಂಪನಾಗಲಿ ಇವನಂಥ ಯಾರೇ ಆಗಲಿ ಎಷ್ಟು, ಎಲ್ಲಿ ಗಮನಿಸಿದರು ?[1] "ಅರಾತಿ ಸಾಧನ ಪಯೋನಿಧಿ" (ಶತ್ರುಸೈನ್ಯ ಸಾಗರ) ಯೇ ಇವನಿಗೆ ಸಂಪತ್ತು ಗಳಿಕೆಗೆ ಸಾಧನವಾಗಿ ಕಂಡಿರೋದು ಇದೇ ಉದಾತ್ತತೆ. ಈ ಉದಾತ್ತತೆಯ ವಿಪುಲ ವರ್ಣನೆ ಕಾವ್ಯದಲ್ಲಿ ಸಮೃದ್ಧವಾಗಿ ಬರುತ್ತದೆ.

---

[1] "ಜನಜೀವನದೊಡನೆ ನೇರ ಸಂಪರ್ಕ ಇಟ್ಟುಕೊಂಡು, ಅವರ ಎದೆಯ ತುಡಿತಗಳೊಡನೆ, ಅವನ ಎದೆಯೂ ತುಡಿಯಿತು", ಅವರ ಮಧ್ಯೆ ಒಂದೇ ಆಗಿ ಬಾಳಿದ (ಪು. 7–8) "ಜನತೆಯ ಮಾತನ್ನು ಜನತೆಗೇ ಅರ್ಥಮಾಡಿಕೊಟ್ಟ, ಜನತೆಯನ್ನು ತಿದ್ದಿದ ಕವಿ (ಪುಟ 12), (ಆಯಾ ಯುಗದ ಮಹಾಕವಿ ತನ್ನ ಯುಗದ ಬಾಳಿನೊಡನೆ ತನ್ನ ಬಾಳನ್ನು ಬೆಸೆದು...." (14 ಪುಟ) "ಆಗಾಗ್ಗೆ ರಾಜ್ಯದಲ್ಲಿ ಹಳ್ಳಿಗಳ ಮಧ್ಯೆ ಸಂಚರಿಸಿ ಸಾಮಾನ್ಯ ರೀತಿ ನೀತಿಗಳನ್ನು ತೆರೆದ ಕಣ್ಣಿಂದ ಪರಿಶೀಲಿಸುತ್ತಿದ್ದ" (ಡಾ॥ ಎಂ, ಚಿದಾನಂದಮೂರ್ತಿ ಸಂಶೋಧನ ತರಂಗದ 'ಪಂಪಕವಿ ಮತ್ತು ಮೌಲ್ಯ ಪ್ರಸಾರ' ಲೇಖನ ನೋಡಿ) ಇತ್ಯಾದಿ ಹೊಣೆಗೇಡಿಯಾಗಿ ಅರ್ಥಹೀನ ಹೊಗಳಿಕೆಗಳಿಂದ ತುಂಬುತ್ತಾರೆ. ಈ ಲೇಖನ ಪ್ರತಿಗಾಮಿ ದೃಷ್ಟಿಕೋನಗಳ ವಿಮರ್ಶಕರ ಪ್ರಾತಿನಿಧಿಕ ಲೇಖನವಿದ್ದಂತಿವೆ. ಸಾಮಾನ್ಯರನ್ನು ಪಂಪ ಗಮನಿಸಿದ್ದಕ್ಕೆ ಡಾ॥ ಚಿದಾನಂದ ಮೂರ್ತಿಗಳು ಕೊಡುವ ಉದಾಹರಣೆಯನ್ನೇ ನೋಡಿ (ಇಡೀ ಕಾವ್ಯದಲ್ಲಿ ಸಾಮಾನ್ಯರ ಬಗ್ಗೆ ಇದೊಂದೇ ವಾಕ್ಯ ಬರುತ್ತದೆ)—

ವಾರಣಾವತಕ್ಕೆ ಪಾಂಡವರು ಬರುವಾಗ ಮಹಾ ಅಗ್ರಹಾರಗಳ ಮಹಾಜನಗಳು ಕೊಟ್ಟ ಬಂಗಾರದ ಜನಿವಾರ ಧರಿಸಿ ಅವರ ಹರಕೆ ಪಡೆದು, ಅವರಿಗೆ ಬಾಧೆಯಾಗದಂತೆ, ರಕ್ಷಣೆಗೆ ನೇಮಿಸಿ, ಊರುಗಳ "ಗಂಡರ, ಪೆಂಡಿರ, ನಡೆಯುಡೆಯ,

ಶ್ರೀಗೆ ಮಂಗಲಾರ್ಥವೂ ಬೇರೆ ಇದೆ. ಅಂತೆಯೆ ಎಲ್ಲ ಕಾವ್ಯಗಳೂ ಶ್ರೀಯಿಂದಲೇ ಪ್ರಾರಂಭವಾಗುವುದು.

ಪಂಪನ ಕಾಲ ಮೌಲ್ಯಗಳ ವೈವಿಧ್ಯಗಳನ್ನು ಗಮನಿಸಬೇಕು. "ಬಂಡಾಯ ಮನೋ-ಧರ್ಮದ ಸ್ವರೂಪ ಅಂದಂದಿನ ಚಾರಿತ್ರಿಕ ಸಂದರ್ಭದ ಒತ್ತಡಗಳನ್ನು ಅವಲಂಬಿಸಿರುವುದರಿಂದ ಹಿಂದಿನ ಕವಿಗಳ ಬಂಡಾಯ ಮನೋಧರ್ಮವನ್ನು ಎಲ್ಲ ಮಿತಿಗಳೊಂದಿಗೆ ಗುರುತಿಸಬೇಕು; ಗೌರವಿಸಬೇಕು. ಪಂಪನಂಥ ಕವಿಯಲ್ಲಿ ಕಾಣುವ ವೈರುಧ್ಯಗಳು ಅಂದಿನ ಸಾಂಸ್ಕೃತಿಕ ಸಂದರ್ಭದ ವ್ಯಾಖ್ಯಾನವೂ ಆಗ ಬಹುದು".—"ಸಾಹಿತ್ಯ ಮತ್ತು ರಾಜಕಾರಣ" ಬ. ರಾಮಚಂದ್ರಪ್ಪ ಪುಟ 14).

ಹಿಂದೆ ನಾರಾಯಣ ಬೇಡಿಕೊಂಡು (ದಾನವಾಗಿ) ಪಡೆದುದು ಪಂಪನ ಕಾಲಕ್ಕೆ ಹೊಂದದ ಮೌಲ್ಯ. (ಇದರರ್ಥ ಬೇಡುವುದೇ ಇರಲಿಲ್ಲವೆಂದಲ್ಲ) ನಾರಾಯಣ ಬ್ರಾಹ್ಮಣನಾಗಿ ದಾನ ಪಡೆವ ಕಾರಭಾರ ಮಾಡಿದರೆ; ಅರಿಕೇಸರಿ (ಉದಾತ್ತನಾರಾಯಣ) ಕ್ಷತ್ರಿಯನಾಗಿ (ವಿಷ್ಣು ಭಕ್ತನಾಗಿ!) ಹೋರಾಡುವುದು ಸಹಜವಲ್ಲವೆ? ಈ ವೈರುಧ್ಯವನ್ನು ಪಂಪ ಸರಿದೂಗಿಸುವನೇ ಪದ್ಯದಲ್ಲಿ? ಈ ಸಂಗತಿ ಅವನ ಕಾವ್ಯಗಳಲ್ಲಿ ಕಾಣುವ ಆನೇಕ ದ್ವಂದ್ವಗಳಿಗೆ ಕಿಡಿಕಿ ತೆರೆಯುತ್ತದೆ.

ಭೌತವಾದ (ಹೆಗೆಲ್—ಮಾರ್ಕ್ಸ್ ಹೇಳಿದಂತೆ) "ಪರಸ್ಪರ ವಿರುದ್ಧ (ತ್ಯಾಗ—ಭೋಗ; ಹಿಂಸೆ—ಅಹಿಂಸೆ; ಇತ್ಯಾದಿ) ಶಕ್ತಿಗಳ—ದ್ವಂದಗಳ—ಘರ್ಷಣೆಯು ವಿಕಾಸ ಕ್ರಮದ ಮೂಲ". ('ಕಾರ್ಲ್ ಮಾರ್ಕ್ಸ್'—ನವಕರ್ನಾಟಕ ಪಬ್ಲಿಕೇಶನ್ ಪುಟ 16—17) ಎನ್ನುತ್ತದೆ. ದ್ವಂದ್ವಗಳ ಮಧ್ಯೆಯ ಸಹಜ ಘರ್ಷಣೆಯನ್ನು ಆಚೆ ಸರಿಸಿ ಸಾಧ್ಯವಿದ್ದ ಮಟ್ಟಿಗೆ ಸಮನ್ವಯವನ್ನೇ ಕಲ್ಪಿಸಲು ಯತ್ನಿಸುತ್ತ ಬಂದಿದ್ದಾರೆ ನಮ್ಮ ಕವಿಗಳು. ದ್ವಂದ್ವಗಳ ಸಹಜ ವೈರುಧ್ಯ, ಘರ್ಷಣೆಯನ್ನು ಕಾಣದಿರುವುದೆ. ಸಮನ್ವಯ ಕಾಣ ತಿಳಿಸುವುದೇ ಭಾರತಿಕಯ ಶೋಷಕ ಪರಂಪರೆಯ ಮುಖ್ಯ ಲಕ್ಷಣಗಳಲ್ಲಿ ಒಂದಾಗಿದೆ. ಈ ಸಮನ್ವಯದ ವಂಚಕ ನೀತಿಯೆ ಧರ್ಮ

---

ನುಡಿಯ, ಮುಡಿಯ, ಗುಂಪಿಗೆ, ಮುಗುಳ್ನಗೆ ನಗುತ್ತ" ಹಾಳಾದ ದೇಗುಲ, ಕೆರೆಗಳ ಜೀರ್ಣೋದ್ಧಾರಕ್ಕೆ ಹಣಕೊಟ್ಟು... ಇತ್ಯಾದಿ (2-97 ಗ—ಪಂಪಭಾರತ) ಜನಸಾಮಾನ್ಯರ ನಡೆನುಡಿ, ಬಟ್ಟೆಗಳನ್ನು ಕಂಡು ಅವರ ಮೂರ್ಖತನ (ಗಾಂಪು)ಕ್ಕೆ ಮುಗುಳ್ನಗುವ ಈ ಶೋಷಕರ ದೃಷ್ಟಿಕೋನವು, ಚಿದಾನಂದಮೂರ್ತಿಗಳಂಥವರಿಗೆ ಸಾಮಾನ್ಯರ ಎದೆಯಲ್ಲಿ ಎದೆ ಬೆಸೆಯುವುದಾಗಿ ಕಂಡಿದೆ! ಇಂಥ ವಿಮರ್ಶಕರ, ಶೋಧಕರ ಅಪಾಯಗಳಿಂದ ಸಂಸ್ಕೃತಿಯನ್ನು ರಕ್ಷಿಸಬೇಕು, ಸಮರ್ಥಿಸಬೇಕಿದೆ.

ಗಳ ಚರಿತ್ರೆಯೂ (ಗಾಂಧಿವಾದಿ etc.,) ಆಗುತ್ತದೆ. ಆದರೆ ಸಮನ್ವಯದ ಈ ಪ್ರತಿಪಾದನೆಯನ್ನು ಬಹು ಉನ್ನತವಾದ ನಯಗಾರಿಕೆಯಿಂದಲೆ ಸಾಧಿಸುತ್ತ ಬರಲಾಗಿದೆ. ಪಂಪ ಭಾರತದ 14—30 ಪೂ. ನೋಡಿ, ರತ್ನಾಕರ ವರ್ಣಿಯಲ್ಲಿ ಯೋಗ—ಭೋಗಗಳ ಇಂಥ ಪ್ರತಿಪಾದನೆಯ ತುಟ್ಟತುದಿ ಇದೆ. ಭಾರತೀಯ ಸಂಸ್ಕೃತಿಯ ಅಭ್ಯಾಸಿಗರೂ ಹೀಗೆ ಅಪಾಯ ಮಾಡಿರುವುದು).

ಪುರಾಣ ಕಾಲದ ನಾರಾಯಣ (ಕಲ್ಪನೆಯಲ್ಲಿ) ಸಂಪತ್ತನ್ನು ಪಡೆಯುವ ಸುಲಭ ವಿಧಾನಗಳ ವೈದಿಕ ಕ್ರಮವನ್ನು (ಮತ್ತು ದೇವರನ್ನೂ ಕೂಡ) ಜೈನ ಪಂಪ ಟೀಕಿಸುವುದರ ಮೂಲಕ ವಿಚಿತ್ರ ವೈರುಧ್ಯವನ್ನು ಪ್ರಸ್ತುತಪಡಿಸುತ್ತಾನೆ. ಪಂಪ ಕಾವ್ಯದಲ್ಲಿ ಅರಿಕೇಸರಿಯನ್ನು ಅರ್ಜುನನ ಜತೆ "ತುಂಗುಳ್ಳಿ ಪೋಲಿಪೊಡೆನಗ ಪಿಯಾದುದು' ಎಂದು ಹೇಳಿದರೂ, ಮಂಗಲಪದ್ಯದಲ್ಲಿ ವಿಷ್ಣುವಿನ ಜತೆ ಅರಿಕೇಸರಿಯನ್ನು ಹೋಲಿಸಿ ಹೊಗಳಿದುದು ಆಭಾಸವೆನಿಸುತ್ತದೆ. ಈ ದೋಷ ರನ್ನನಲ್ಲೂ ಆಗಿದೆ, ಪಂಪನ ಹೆಜ್ಜೆಯಲ್ಲೇ ನಡೆದಿರುವುದರಿಂದ' (ಕರ್ನಾಟಕ ಭಾರತಿ 9-3),

'ಪಂಪನ ಪದ್ಯದಲ್ಲಿ ನಿರಾಯಾಸವಾಗಿ ಲಕ್ಷ್ಮಿ ಎಂಬ ಸ್ತ್ರೀಯನ್ನು (ಭೋಗಕ್ಕೆ ಸಂಕೇತ) ಪಡೆದ ವಿಷ್ಣುವಿಗಿಂತ, ಸ್ವಪ್ರಯತ್ನದಿಂದ ಜಯವೆಂಬ ಲಕ್ಷ್ಮಿಯನು (ಶೌರ್ಯಕ್ಕೆ ಸಂಕೇತ) ಪಡೆದ ಉದಾತ್ತ ನಾರಾಯಣನ (ಅರಿಕೇಸರಿಯ) ಆತಿಶಯತೆ ವ್ಯಕ್ತವಾಗಿದೆ. ಇಲ್ಲಿ ಪಂಪ ಭೋಗಲಕ್ಷ್ಮಿಗಿಂತ ಜಯಲಕ್ಷ್ಮಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ್ದಾನೆ. ಪಂಪನ ಕಾಲ ಮೌಲ್ಯ ಇದು" (ಅದೇ) ಸಂಪತ್ತು (ಭೋಗ), ಶೌರ್ಯ (ಜಯ) ಎರಡೂ ಒಂದಕ್ಕೊಂದು ಪೂರಕವಾದ್ದರಿಂದ ಇವೆರಡನ್ನೂ ಅರಿಕೇಸರಿ ಪಡೆಯುವಲ್ಲಿ ಉದಾತ್ತವಾದನೆಂದೂ ಕವಿ ಆಶಯವಿದ್ದಿರಬಹುದು. ತನ್ನ ಕಾವ್ಯ ರಾಜರಿಗೂ, ಭೋಗಿಗಳಿಗೂ ಹೇಗೆಲ್ಲ ಪ್ರಯೋಜಕವೆಂಬುದನ್ನು ಕಾವ್ಯದ ಅಂತ್ಯದಲ್ಲಿ ಪಂಪ ಹೇಳಿಕೊಂಡಿದ್ದಾನೆ; (14-93, 65 ನೋಡಿ). ಅಂತೆ ವೀರ-ಭೋಗಗಳೆರಡಕ್ಕೂ ಸಾಕಷ್ಟು ಪ್ರಾಶಸ್ತ್ಯ ಕೊಟ್ಟಿರುವನು. ಇವು ಶೋಷಕರ ಮೌಲ್ಯಗಳು.

ನಾರಾಯಣನಂತೆ ನಿರಾಯಾಸವಾಗೇ ಪಡೆದಿರಲಿ (ಕಡಲು ಕಡೆದವರು ಯಾರೊ ?), ಅರಿಕೇಸರಿಯಂತೆ ಹೋರಾಡಿ ಪಡೆದಿರಲಿ, ಈ 'ಪಡೆಯುವ' ಪದ್ಧತಿಯಲ್ಲಿ ಬ್ರಾಹ್ಮಣ—ಕ್ಷತ್ರಿಯರೆಂಬ ಈ ಶೋಷಕರ ಕುತಂತ್ರ ಶೋಷಣೆ, ತಂತ್ರ ಮಾತ್ರ ಹೊರಬೀಳಬೇಕೆಂಬುದನ್ನೇ ಚಾರಿತ್ರಿಕ ಭೌತವಾದಿ ದೃಷ್ಟಿಕೋನ ಅಪೇಕ್ಷಿಸುತ್ತದೆ. ಮತ್ತು ಆಯಾ ಕಾಲದ ಈ ತಳಹದಿಯ ಮೇಲೆಯೆ (ಆರ್ಥಿಕ—ರಚನೆ) "ಆ ಕಾಲಾವಧಿಯ ರಾಜಕೀಯ ಸಂಸ್ಥೆ, ಧಾರ್ಮಿಕ ಸಂಸ್ಥೆ, ಆಡಳಿತ ವರ್ಗ,

ನ್ಯಾಯಾಂಗ, ಸಾಂಸ್ಕೃತಿಕ ಸಂಸ್ಥೆಗಳು ಇವುಗಳನ್ನು ಒಳಗೊಂಡ ಮೇಲು ರಚನೆಗೂ ಮತ್ತು ಒಟ್ಟಾರೆ ವ್ಯಕ್ತವಾಗುವ ತಾತ್ವಿಕ ಸಿದ್ಧಾಂತಗಳಿಗೂ ನಡುವಣ ವಾಸ್ತವಿಕ ಸಂದರ್ಭವನ್ನು ಗುರುತಿಸಬೇಕು"––("ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ" ಪುಟ-17 ಕಿ. ರಂ. ನಾಗರಾಜ)

ಪುರಾಣ ಕಾಲದ ನಾರಾಯಣ ಅನಾಯಾಸ ಪಡೆದುದೂ ಸಹಜವೆಂತೊ ಅಂತೆ ಇತಿಹಾಸ ಕಾಲದ ಅರಿಕೇಸರಿ ಭೋಗಕ್ಕೆ ಜಯಲಕ್ಷ್ಮಿಯನ್ನು ಪಡೆದುದು ('ಹೋರಾಡಿ'—ಸ್ವಲ್ಪ ರಿಸ್ಕ ತಗೊಂಡಿರಬಹುದು!) ಸಹಜವಾಗಿತ್ತು, ಶೋಷಕರು ಸಂಪತ್ತನ್ನು ಗಳಿಸುವ ವಿಧಾನದಲ್ಲಿ ಕಾಲಕಾಲಕ್ಕೆ ತಕ್ಕ ವ್ಯತ್ಯಾಸಗಳಿರಬಹುದು ಆದರೆ ಶೋಷಣೆಯ ಮೂಲನಿಯಮ ತಪ್ಪಲೇ ಇಲ್ಲ, ಅದು ವರ್ಗ ರಹಿತ ಸಮಾಜ ದಲ್ಲಿ ಮಾತ್ರ ತಪ್ಪುವಂತಹದು. "ಪ್ರಭುವಿನ ಯುದ್ಧ, ಖುಷಿ ಇತ್ಯಾದಿಗಳನ್ನು ಅಟ್ಟಕ್ಕೇರಿಸಿ, ವ್ಯವಸ್ಥೆಯನ್ನು ಪೋಷಿಸಿಕೊಂಡು ಬರುವ ಸಾಹಿತ್ಯಸೃಷ್ಟಿ ಆಯಿತು." —ಸಿದ್ಧಲಿಂಗಯ್ಯ ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ"—ಪುಟ-70)

೨ನೇ ಅಂಶ:—ಭೂಮಿಯನ್ನು ವಾಮನಾವತಾರದ ನಾರಾಯಣ ಬಲಿ ಚಕ್ರವರ್ತಿಯಿಂದ (ಕ್ಷತ್ರಿಯ ಮತ್ತು ಬ್ರಾಹ್ಮಣ ಭಕ್ತ) 'ಜೀಯ' ಎಂದರೂ ಕೂಡ ಮೋಸದಿಂದ (ಪಾದವನ್ನು ತಲೆಯ ಮೇಲಿಟ್ಟು) ಬೇಡಿ ಪಡೆದ. 'ಉದಾತ್ತ ನಾರಾಯಣನ ಸ್ವಾಭಿಮಾನ ಶೌರ‍್ಯಕ್ಕೆ, ವಿರೋಧಿ ನರೇಂದ್ರರನೊತ್ತಿಕೊಂಡು ಪಡೆದದ್ದು ಸಾಕ್ಷಿ. ಹೀಗೆ ಉದಾತ್ತನಾರಾಯಣನಲ್ಲಿ 'ವೈದಿಕನಾರಾಯಣ'ನ ದೋಷ ಪರಂಪರೆಯಿಲ್ಲ. ವೈದಿಕನಾರಾಯಣನನ್ನು ಉದ್ದೇಶಪೂರ್ವಕವಾಗಿ ಜೈನ ಕವಿ ಪಂಪ ಕೀಳುಮಾಡುತ್ತಿರುವನೆ? ಅಥವ ವೈದಿಕನಾದ ಅರಿಕೇಸರಿ ತನ್ನ ಆರಾಧ್ಯ ದೈವನಾದ ವಿಷ್ಣುವಿಗಿಂತ ಉದಾತ್ತನೆಂದು ಹೊಗಳಿಸಿಕೊಳ್ಳುವ ಅತಿ ಪ್ರತಿಷ್ಟಿತ; ಮನೋಭಾವದವನೇ ?' (ಕ. ಭಾ. 9-3)

ರಾಜ ಅಷ್ಟು ಬುದ್ಧಿವಂತನಿದ್ದಾನೊ ಇಲ್ಲೋ (ಸರಸ್ವತಿ, ರಾಜನಿಗೆ ತನ್ನ ಮೂಲಕ ವಿಶುದ್ಧ ಬುದ್ಧಿ ಕೊಡಲಿ ಎನ್ನುತ್ತಾನೆ—5ನೇ ಪದ್ಯ.) ಭಟ್ಟಂಗಿಯಾದ ಕವಿ ಪಂಪನಂತೂ ನಿಸ್ಸಂಶಯವಾಗಿ ಬುದ್ಧಿವಂತ.

ಆ ಕಾಲದ ಮುಖ್ಯ ಸಂಪತ್ತಾದ ಭೂಮಿಯನ್ನು ಈ ಉದಾತ್ತನಾದ ನಾರಾಯಣದೇವ (ಅರಿಕೇಸರಿ) ಜೀ ಎಂದು ಪಡೆಯಲಿಲ್ಲವೆಂದು ಪಂಪ ತನ್ನ ಆಶ್ರಯದಾತನ ಅತಿಶಯತೆಯನ್ನೂ, ವಿಶೇಷತೆಯನ್ನೂ. ಉದಾತ್ತತೆಯನ್ನೂ ಎತ್ತಿ ಹಿಡಿದು, ವೈದಿಕ ನಾರಾಯಣನನ್ನು ಅಣಕಕ್ಕಿಟ್ಟುಕೊಂಡಿದ್ದಾನೆ. ಆದರೆ 9ನೇ ಆಶ್ವಾಸದ ಒಂದೆಡೆ (9-20) ಕೃಷ್ಣ ಬಲಿಯನ್ನು ವಾಮನ ರೂಪದಿಂದ ನಾನು

ಬೇಡಿದೆ; ನನಗೆ ಕುಂದಾಯ್ತೆ ?' ಎಂದು ಕೇಳುವನು. ಇಲ್ಲಿ ಪಂಪ ನಾರಾಯಣನ ಜೀಯೆನೆ ಬೇಡಿದ ಕ್ರಮವನ್ನು ಸಮರ್ಥಿಸುವನು. ಇನ್ನೂ ಕೆಲ ಪ್ರಸಂಗಗಳಲ್ಲಿ ಬಲಿ ಪ್ರಸಂಗವನ್ನು ಪಂಪ ಸ್ಮರಿಸುವನು. ದುರ್ಯೋಧನನ ಆಸ್ಥಾನದಲ್ಲಿ ವಿಶ್ವರೂಪ ವನ್ನು ('ವೈಷ್ಣವದಿಂದ') ತೋರಿಸುವಾಗ ಭೂಮಿಯನ್ನೆಲ್ಲ ಮೂರು ಹೆಜ್ಜೆಗಳಲ್ಲಿ ಅಳೆದಾಗ ಬಲಿ ಚಕ್ರವರ್ತಿಗೆ ಉಂಟಾದ ರೂಪವನ್ನು ತೋರಿಸಿದ (9-60) ಎಂದು ಬರುತ್ತದೆ. ಇಲ್ಲಿಯೂ ಕೂಡ ವಿಷ್ಣುವಿನ ಪರ-ಸಮರ್ಥನೆಯೇ ಇದೆ. ಪ್ರಥಮ ಪದ್ಯದ ವ್ಯಂಗ್ಯ ಉಳಿದೆಡೆಗಳಲ್ಲಿ ಬರುವ ಸಮರ್ಥನೆ ಇವುಗಳ ವೈರುಧ್ಯವೂ ಗಮ ನಾರ್ಹವೆಂಬುದನ್ನು ಇಲ್ಲಿ ಸೂಚಿಸಬಯಸುತ್ತೇನೆ. ಮತಾಂತರಗೊಂಡ 'ಪಂಪನೂ ಬ್ರಾಹ್ಮಣನೇ, ಜೈನ-ಬ್ರಾಹ್ಮಣ' (ಶಿವರಾಮು ಕಾಡನಕುಪ್ಪೆ-ಬದುಕು-7) ತನ್ನ ಹಿಂದಿನವರ ಮತ್ತು ತನ್ನ ಈಗಿನ ಜಾತಿಗಳ ಬಗ್ಗೆ (ಬ್ರಾಹ್ಮಣ ಮತ್ತು ಜೈನ) ಪಂಪನಿಗೆ ಹೆಮ್ಮೆ ಇದೆ. ಕಾವ್ಯದ ಕೊನೆಯ ಪದ್ಯಗಳಲ್ಲಿ ಇದನ್ನು ನೋಡಬಹುದು. ಇಲ್ಲಿ ತೋರು ಜಾತಿ ವೈರುಧ್ಯಗಳೂ ಕೂಡ ಅವನ ಕಾವ್ಯದಲ್ಲಿ ಮುಂದೆ ವಿವರವಾಗಿ ಬಿಚ್ಚಿಕೊಳ್ಳುತ್ತವೆ.

ನಾರಾಯಣನಿದ್ದ ನಿಲ್ಲೊ, ಈ ಉದಾತ್ತ ನಾರಾಯಣನಿಂದ ಬರುವ ಸುಖ ಊಟಿಗಳ ಮೇಲೆ ಪಂಪನ ಕಣ್ಣಿದೆ. ಮತ್ತು ಅದು ದೊರಕಿದ್ದಕ್ಕೂ ಅವನ ಕಾವ್ಯದ ಕೊನೆಯ ಪದ್ಯಗಳೆ ಸಾಕ್ಷಿ. ಈ ಲೌಕಿಕ ಆಶೆ, ಭೌತವಾದಿ ಆಶಯ ಮೆಚ್ಚುವಂತ ಹದು. ಆದರೆ ರಾಜಶಾಹಿಗೆ ಒಪ್ಪಿಸಿಕೊಳ್ಳುವ ನಿಷ್ಠೆ ('ಪರರೀವುದೇಂ' ಎಂದು ಮತ್ತೊಂದೆಡೆ ಹೇಳುತ್ತಿದ್ದರೂ ಕೂಡ)ಯ ಭಟ್ಟಂಗಿತನವನ್ನು ನಾವು ನಿರ್ಲಕ್ಷಿಸು ವಂತಿಲ್ಲ. ಇಲ್ಲಿ ವ್ಯಕ್ತವಾಗುವ ದ್ವಂದ್ವವೂ ನಮಗೆ ಬಹು ಮುಖ್ಯ. 'ರಾಜತ್ವ ವನ್ನು ಕುರಿತ ಅಧ್ಯಾತ್ಮವಾದಿ ವಿವರಣೆ ಆ ಹೊತ್ತಿನ ವಿವಿಧ ಅಗತ್ಯಗಳಿಗೆ ತಕ್ಕಂತೆ ರೂಪುಗೊಂಡಿರುವುದಾಗಿದೆ.'—(ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ ಪುಟ-6).

ರಾಜಶಾಹಿ ಪುರೋಹಿತಶಾಹಿಗಳ, ಅತ್ಯಂತ ಚಾಣಾಕ್ಷ ವ್ಯಾಖ್ಯಾನಕಾರರಾ ಗಿದ್ದ ಕವಿಗಳ ಕಾವ್ಯಗಳು ಕಾಟಸ್ಥಿತಿಯ ಅನೇಕ ಮುಖ್ಯ ಸಂಗತಿಗಳನ್ನು ಒಳಗೊಂಡಿ ರುವವು ಎಂಬುದನ್ನು ಲಕ್ಷಿಸಬೇಕು, "ಶ್ರೇಷ್ಠ ಸಾಹಿತ್ಯ ಕೃತಿಗಳ ಸಂದರ್ಭಗಳು ಸಂಕೀರ್ಣವಾಗಿರುತ್ತವೆ." (ಒಡನಾಡಿ 7-೩. ಪುಟ 138) ಎಂಬ ಮಾತನ್ನು ಗಮನದಲ್ಲಿಟ್ಟುಕೊಂಡೆ ಈ ವಿಶ್ಲೇಷಣೆಯನ್ನು ನೋಡಬೇಕು,

'ರಾಜ ಪ್ರತ್ಯಕ್ಷ ದೇವತಾ' ಎಂಬ ಶೋಷಕ ಮೌಲ್ಯವನ್ನು ಎಲ್ಲ ಕಲೆಗಳ ಕೇಂದ್ರ ಸ್ಥಾನವಾದ ರಾಜಸ್ಥಾನದಲ್ಲಿ ಕೂತು ಬರೆಯಬೇಕಿದ್ದ ಸ್ವತಂತ್ರಜೀವಿ ಕವಿ ಗಳಿಗೂ ಹರಡಬೇಕಾದ ಒತ್ತಡವಿತ್ತು. ಪ್ರಥಮ ಪದ್ಯದಿಂದಲೆ ಈ ಕೆಲಸವನ್ನು

ಪಂಪ ಶುರು ಮಾಡಿದ್ದಾನೆ. ಕವಿಗಳು ತಮ್ಮ ಕಾವ್ಯಗಳಿಗೆ ಮನ್ನಣೆ ಪಡೆಯ ಬೇಕಾದರೆ, ಪಂಡಿತರಿರುವ, ಮತ್ತು ಎಲ್ಲ ರೀತಿಯ ಸುಖ-ಸವಲತ್ತುಗಳಿರುವ ರಾಜನಾಸ್ಥಾನವನ್ನು ಕುರಿತು ಹಂಬಲಿಸುವುದು ಸಹಜವಾಗಿತ್ತು. "ರಾಜ ಪ್ರಭು ತ್ವವು ಧರ್ಮ, ಸಾಹಿತ್ಯ ಲಲಿತಕಲೆ-ಎಲ್ಲದರ ಸಂರಕ್ಷಣಾ ಸ್ಥಾನವಾದ್ದರಿಂದ ಕವಿಗಳೂ ಅದನ್ನು ಅವಲಂಬಿಸಿದರು....ಇಂಥ ಕೇಂದ್ರಸ್ಥಾನದಿಂದ ಹೊರಡುವ ಸಾಹಿತ್ಯದ ಧೋರಣೆ ವ್ಯವಸ್ಥೆಯಿಂದ ಬಹಳ ಭಿನ್ನವಾಗಿರಲು ಹೇಗೆ ಸಾಧ್ಯ?"— ("ಸಾಹಿತ್ಯ. ಮತ್ತು ರಾಜಕಾರಣ"—ರಾಮಚಂದ್ರಪ್ಪ ಬಿ. ಪುಟ 49)

ತಮ್ಮ ಆಲೋಚನೆ, ಶೈಲಿ, ಕಥಾವಸ್ತು ಎಲ್ಲವನ್ನೂ ಕಠಿಣವಾದ ಕಬ್ಬಿಣದ ಕಡಲೆಯಂಥ ಛಂದಸ್ಸುಗಳಲ್ಲಿ, ಪಂಡಿತರು ಮೆಚ್ಚುವಂತಿರಬೇಕು (ಇದಕ್ಕೆ ಸತತ ಪ್ರಯತ್ನ, ಅಭ್ಯಾಸ ಅಗತ್ಯವಿತ್ತು) ಎಂಬ ಪರಂಪರೆಯಲ್ಲಿ ಪಂಪ ಅವನಂತಹರು ಬಂದರು, ಆ ಪರಂಪರೆಯ ಒಂದೊಂದು ಕೊಂಡಿಗಳಾದರು. "ಒಂದು ವರ್ಗಕ್ಕೆ ವಿಶಿಷ್ಟವೆನ್ನಬಹುದಾದ ವೈಚಾರಿಕ ಕ್ರಿಯೆ ಹಾಗೂ ಮಾತಂಕತೆಯ ಶೈಲಿ... ಕೃತಿಯ ಶೈಲಿಯ ಮೇಲೆ ಪ್ರಭಾವ ಬೀರುತ್ತವೆಯಷ್ಟೇ ಅಲ್ಲದೆ ಕೃತಿಯಲ್ಲಿ ಶೈಲಿಯ ಸ್ವರೂಪ ವನ್ನು, ನಿರ್ಣಯಿಸುವಲ್ಲಿ ಪೂರಕವಾಗುತ್ತವೆ. ಒಂದು ರೂಪ ಒಂದು ಕೃತಿಗೆ ಮಾತ್ರ ಸೀಮಿತವಾಗಿರಬೇಕೆಂದಿಲ್ಲ, ಅದು ಒಂದು ಸಾಹಿತ್ಯ ಚಳುವಳಿಗೆ ಅಥವಾ ಇಡೀ ಯುಗಕ್ಕೆ ಸಂಬಂಧಿಸಿದ್ದಾಗಬಹುದು," (ಒಡನಾಡಿ 7–8 ಪುಟ 136–137)

ಕಾವ್ಯಕ್ಕೆ ಇವರು ಹೇಳುವ ಉದ್ದೇಶ, ರಸಾನಂದ-ಬ್ರಹ್ಮಾನಂದದ ತಮ್ಮ ನಂತೆ ಎಂಬಿತ್ಯಾದಿ ಹೇಳಿಕೆಗಳೂ (ಭಾರತೀಯ ಕಾವ್ಯ ಮೀಮಾಂಸೆ) ಚರ್ಚಾರ್ಹ. ಬ್ರಹ್ಮಾನಂದವೂ ಕಲ್ಪನೆ, ಭ್ರಮೆಯಾದರೆ, ಕಾವ್ಯಾನಂದವೂ ಹಾಗೇ ಆದೀತು. ಆದರೆ ಕಲೆಗೆ ಕೆಲವಾದರೂ ಭೌತಿಕ, ಆಯಾಮಗಳಿವೆ, ಆಕರ್ಷಕತೆ ಪರಿಣಾಮ ಬೀರುವ ಗುಣವಿದೆ. ಆದರೆ ರಸಾದಿ ವಿಷಯಗಳೂ ಕೂಡ ಶೋಷಕ ಸಾಹಿತ್ಯಕ ಮಾನದಂಡಗಳಲ್ಲಿ ಮುಖ್ಯವಾದವೆಂಬುದನ್ನಷ್ಟೆ ಇಲ್ಲಿ ಸೂಚಿಸಬಹುದು. ಇದರ ದೀರ್ಘ ಚರ್ಚೆ ಅಗತ್ಯ. "ಆಳುವ ವರ್ಗದ ಭಾವನೆಗಳೆ ಇಡೀ ಸಮುದಾಯದ ಭಾವನೆಗಳು ಎನ್ನುವಂಥ ಸಾಹಿತ್ಯ ಸೃಷ್ಟಿ ಆಯಿತು. ಅದರ ಮೂಗಿನ ನೇರಕೆ ಕಾವ್ಯ ಮೀಮಾಂಸೆ, ವಿಮರ್ಶೆಯ ಮಾನದಂಡಗಳು ಸಿದ್ಧವಾದವು"–ಸಿದ್ದಲಿಂಗಯ್ಯ.

ಇಲ್ಲಿಯ ನಾರಾಯಣ (ಕೃಷ್ಣ) ಮುಂದೆ ಕಾವ್ಯದಲ್ಲಿ ಒಂದು ಪಾತ್ರವೂ ಕೂಡ ಆಗಿದ್ದಾನೆ. ಅಲ್ಲೆಲ್ಲ ಪಾಂಡವರು (ಉದಾತ್ತ ನಾರಾಯಣನೂ ಸೇರಿ=ಅರ್ಜುನ ನಿಗೆ (ಅರಿಕೇಸರಿ ಬಿರುದು) ಈ ಪದವನ್ನೇ ಕಾವ್ಯದ ಹಲವೆಡೆ ಕವಿ ಬಳಸುವನು. ಉದಾ: 1-147 (ಗ), 2-39 (ಗ), 4-33 (ಗ), 4-43 (ಗ), 45, 5-20

(ಗ), 35 (ಗ), 47 (ಗ), 10-11 ಇತ್ಯಾದಿ) ನಾರಾಯಣನನ್ನು ದೈನ್ಯತೆಯಿಂದ ಭಕ್ತಿಯಿಂದ ಆಶ್ರಯಿಸುವರು. ಆದರೆ ಇಲ್ಲಿ ಮಾತ್ರ ಕವಿ ಪಾಂಡವರಲ್ಲೊಬ್ಬನನ್ನು ಮಾತ್ರ ಉದಾತ್ತ ನಾರಾಯಣನೆನ್ನುವ ಮೂಲಕ ಗೊಂದಲವೆಬ್ಬಿಸಿಕೊಂಡಿದ್ದಾನೆ. ಇಂಥ ಯಾವ ಗೊಂದಲಗಳು, ಹಾಗೆ ಕಾಣಿಸದಂತೆ ತೋರಿಸುವುದೇ ಕವಿಗಳ ಅಸಂಬದ್ಧ ಕ್ರಮವೆ ಆಗಿರುತ್ತದೆ. ಆದ್ದರಿಂದ (ಅನೌಚಿತ್ಯತೆ) ಇದು ಮುಚ್ಚಿಕೊಂಡು ಹೋಗುತ್ತದೆ.

**3ನೇ ಅಂಶ:** ಆತ್ಮೀಯ ಸುಪುಷ್ಪ ದೃಷ್ಟಿಯನ್ನು ತಾಳಿದವ ಉದಾತ್ತ ನಾರಾಯಣ. ನಾರಾಯಣನು ಹೂಗಣ್ಣವೆಂಬ ಅಂಗವಿಕಲತೆಗೆ ಒಳಗಾದರೆ, ಹೂವಿನಂಥ ಸುಂದರ ಕಣ್ಣು, ಪಡೆದವನೆಂದು–ಉದಾತ್ತನಾರಾಯಣನಿಗೆ ಹೇಳಿದ್ದಾನೆ, (ರನ್ನ ಇದೇ ಸಂದರ್ಭದಲ್ಲಿ 'ಅಬ್ಜಾಯತುನೇತ್ರ' ಎಂದು ಹೇಳಿರುವುದು ಬರಿ ಆಕಸ್ಮಿಕವಾಗಿರಲಿಕ್ಕಿಲ್ಲ)

ಇಂಥ ದೇವನಾದ ಉದಾತ್ತನಾರಾಯಣ (ಅರಿಕೇಸರಿ = ಅರ್ಜುನ) ಸೌಖ್ಯ ಕೋಟಿಯನ್ನು ಕೊಡಲಿ ಎಂದು ಯಾಚಿಸಿದ್ದಾನೆ ಕವಿ. ತನ್ನ ಈ ಲೌಕಿಕ ಕಾವ್ಯದಿಂದ ಭೋಗ ಜೀವನದ ಸೌಖ್ಯಕೋಟಿಯನ್ನು ನಿರೀಕ್ಷಿಸಿದ್ದ ಕವಿಯು (ಅದನ್ನು ಪಡೆದ ಕೂಡ) ಮಂಗಲದ ಪದ್ಯದಲ್ಲಿ (ನಾರಾಯಣನನ್ನು ಭೋಗಕ್ಕಾಗಿ ಆಶ್ರಯಿಸಿದ (9–13 ನೋಡಿ) ಪಾಂಡವರ ಕಥೆ ಹೇಳಲು ಹಿನ್ನೆಲೆಯಾಗಿ ರಾಜನನ್ನು ಹೊಗಳುತ್ತಿದ್ದವನು. ರಾಜರಾಸ್ಥಾನದಲ್ಲಿ ಯಾಚಕರ ಸೈನ್ಯವೇ ಇರುತ್ತಿತ್ತು. ಇವರು ಚಾಣಾಕ್ಷ ಬುದ್ಧಿಜೀವಿ ಪರಾವಲಂಬಿಗಳು, ನಾಲಗೆಯನ್ನು ಮಾರಿಕೊಂಡವರು. ಇವರಿಗೆ ದಾನ ಪಡೆಯುವುದರಿಂದಲೇ ಭೋಗ ಕವಿಗಳೂ ಯಾಚಕರಾಗಿರಬೇಕಾಗಿದ್ದ ಸ್ಥಿತಿ. ರಾಜರು ತಮ್ಮ ಹಂಗಿನಲ್ಲಿ ಕವಿಗಳನ್ನು ಕೆಡವಿಕೊಂಡು, ತಮ್ಮ ವರ್ಗ ಹಿತಾಸಕ್ತಿಯನ್ನು ಕಾವ್ಯಗಳ ಮೂಲಕ ಉಳಿಸಿಕೊಂಡರು. ದಾನ ಶ್ರೇಷ್ಠವೆಂಬ, ದುಡಿಯದೆ ಉಣ್ಣುವವರ ಜಾತಿ ಗುಂಪುಗಳು ಹೇಳುತ್ತ ಬಂದ ಪರಂಪರೆ ಇದೆ. ದಾನಗಳಲ್ಲಿ ಅನೇಕ ಪ್ರಕಾರಗಳಿವೆ. (ಹೆಣ್ಣೂ ದಾನದ 'ವಸ್ತು') ('ದನ' ದಾನದ ಶ್ರೇಷ್ಠ ವಸ್ತು!) ಅದನ್ನು ಕೊಡುವುದು ಪಡೆಯುವುದು ಶ್ರೇಷ್ಠ ಕಾಯಕವೆಂದು ಹೇಳುತ್ತ ಮಾಡುತ್ತ ಬಂದರು. ದಾನ ಅಮಾನವೀಯ, ಮೋಸ ಪರಾವಲಂಬನೆ, ಸ್ವಾಭಿಮಾನಕ್ಕೆ ಪೆಟ್ಟು ಕ್ರಿಯಾಶೀಲತ್ವಕ್ಕೆ ಏಟು, ಹೀಗೆಲ್ಲಾ ಈಗಿನ ಪ್ರಜಾಪ್ರಭುತ್ವೀಯ ಮೌಲ್ಯಗಳ ಹಿನ್ನೆಲೆಯಲ್ಲಿ ಅರಿಯಬಹುದು. ಯಾಕೆಂದರೆ ದುಡಿಯುವವರು ಅಸಂಖ್ಯ ಜನ. ಇದರ ಫಲವನ್ನು ಅನೇಕ ರೀತಿಯಿಂದ ಕಸಿಯುವವರು ಉನ್ನತರೆನಿರುವ ಹಲವರು. ಇವರ ಆಶ್ರಯದಲ್ಲಿ ದಾನ ಪಡೆಯುವವರ ಪಡೆ; ಐಷಾರಾಮಿ ಜೀವನ. ಹೀಗೆ ದಂಡಿವೆಂಗಾರರ ಶ್ರಮ ಫಲವನ್ನೆಲ್ಲ ಇವರು ತಮ್ಮ ಬಲಗಳಿದ್ದಂತೆ ಹಂಚಿಕೊಳ್ಳುವರು. ಈ ವಿಧಾನಗಳಲ್ಲಿ 'ದಾನ' ಒಂದು.

ಇದನ್ನು ಪಂಪ ಶೋಷಕ ಪರಂಪರೆಗನುಗುಣವಾಗಿ ಒಂದು 'ಮೌಲ್ಯ'ವೆಂದೆ ಹೇಳುವನು. ಪಂಪ ಆದರ್ಶ ಮಾನವನ ಕಲ್ಪನೆ ಕೊಡುವೆನೆಂದು ನಂಬಿರುವ "ಬೌಗದ ಭೋಗದಕ್ಕರದ ಗೇಯುದ..." ಪದ್ಯವಲ್ಲದೆ ಮತ್ತು ಹಲವೆಡೆ (1-3, 14-20 (or) 21. 30, 36 ಇತ್ಯಾದಿ) ಇದನ್ನು ಸ್ಪಷ್ಟಗೊಳಿಸುವನು,

"ವರ್ಗಸಮಾಜದಲ್ಲಿ ಪ್ರತಿಯೊಂದು ವರ್ಗವು ಕಲಾತ್ಮಕ ಮತ್ತು ರಾಜಕೀಯ ಮಾನದಂಡಗಳನ್ನು ಹೊಂದಿರುತ್ತದೆ. ಆದರೆ ಎಲ್ಲಾ ವರ್ಗಸಮಾಜಗಳು ರಾಜಕೀಯ ಮಾನದಂಡದನ್ನೇ ಮೊದಲಿಡುತ್ತವೆ. ನಂತರ ಸಾಹಿತ್ಯಕ ಮಾನದಂಡವನ್ನು ಎರಡನೆಯದಾಗಿ ಗಮನಿಸುವವು"—ಮಾವೊ.


# ಸೂತ್ರಧಾರ

ವಸಂತ ಕಾನೇಟಕರ್ ಅವರ

**'ನಾನೇನೊ ಹೇಳಬೇಕು'**

ಕನ್ನಡಕ್ಕೆ : ವೈಶಾಲಿ ಕಾಸರವಳ್ಳಿ

ನಿರ್ದೇಶನ : ಸಿ. ಹೆಚ್. ಲೋಕನಾಥ್

ಮೇ 4 ಮತ್ತು 6 ರಂದು ಸಂಜೆ 7ಕ್ಕೆ

ರವೀಂದ್ರ ಕಲಾಕ್ಷೇತ್ರದಲ್ಲಿ

## ಸಮುದಾಯದ ಚಟುವಟಿಕೆಗಳು

ಮಂಗಳೂರು ಹಾಗೂ ಪುತ್ತೂರು ಸಮುದಾಯದವರು ಜಂಟಿಯಾಗಿ ನವ ಮಂಗಳೂರು ಬಂದರಿನ ಸ್ಟಾಫ್ ಕ್ಲಬ್‌ನಲ್ಲಿ ತಾ. 27-3-82ರಂದು ಬೆಲೆ ಏರಿಕೆ ಹಾಗೂ ಅಲಿಘರ್ ಎಂಬ ನಾಟಕಗಳನ್ನು ಪ್ರದರ್ಶಿಸಿದರು (ನಿರ್ದೇಶನ: ಶಶಿಧರ ಅಡಪ, ಎಸ್. ಎಸ್. ಭಟ್ ಮತ್ತು ಐ. ಕೆ. ಬೋಳುವಾರು).

* * *

ತೋರಣಗಲ್ಲು ಸಮುದಾಯದವರು ದಿನಾಂಕ 10-2-82 ರಂದು ಹತ್ತಿರದ ಜೋಗ ಎಂಬ ಗ್ರಾಮದಲ್ಲಿ ಬೆಲ್ಚಿ, ಪತ್ರೆ ಸಂಗಪ್ಪನ ಕೊಲೆ ಎಂಬ ನಾಟಕಗಳನ್ನು ಪ್ರದರ್ಶಿಸಿದೆ, (ಸುಮಾರು 8 ಮೈಲುಗಳಷ್ಟು ದೂರ ನಡೆದುಕೊಂಡೇ ಹೋಗಿ ಹಳ್ಳಿಯಲ್ಲಿ ಕೊಟ್ಟ ಕಾರ್ಯಕ್ರಮಕ್ಕೆ ಉತ್ತಮ ಪ್ರತಿಕ್ರಿಯೆ ದೊರೆತಿದೆ).

* * *

ದಿನಾಂಕ 26-3-82ರಂದು ಅಲ್ಲಿಯೇ ಮಂಡೂಕ ರಾಜ್ಯ ಎಂಬ ನಾಟಕವನ್ನು ಪ್ರದರ್ಶಿಸಿದರು, ಅಲ್ಲಿನ ಸರ್ವಸದಸ್ಯರ ಸಭೆ ನಡೆದು ಈ ಕೆಳಕಂಡವರನ್ನು ಪದಾಧಿಕಾರಿಗಳನ್ನು ಆರಿಸಲಾಯಿತು. ಅಧ್ಯಕ್ಷರು: ಕೆ. ವೆಂಕಟೇಶಲು, ಉಪಾಧ್ಯಕ್ಷರುಗಳಾಗಿ ಚಿ. ಅಂಬಣ್ಣ, ಜೆ, ಎಂ. ಚೆನ್ನಬಸವಯ್ಯ, ಕಾರ್ಯದರ್ಶಿ: ವಿ.ಜಿ. ಶರಣಕುಮಾರ್, ಸಹ ಕಾರ್ಯದರ್ಶಿಗಳಾಗಿ ಯು. ಶಂಕ್ರಣ್ಣ, ಕೆ. ಪಂಪಾಪತಿ. ಖಜಾಂಚಿಯಾಗಿ ಕೆ. ಪ್ರಭಾಕರ್, ಲೆಕ್ಕ ಪರಿಶೋಧಕರಾಗಿ ಆರ್. ಬಸಪ್ಪ ಅಲ್ಲದೆ ಸಂಚಾಲಕರಾಗಿ ಡಾ॥ ಕೆ. ಪಿ. ಸಿ, ಶೆಟ್ಟಿ ಮತ್ತು ಪಿ. ಅಶೋಕ್ ಹಾಗೂ ಲೈಬ್ರರಿಯನ್ ಆಗಿ ಜಿ. ನಾಗೇಂದ್ರಯ್ಯ ಇಬ್ಬರು ಕೇಂದ್ರ ಸಮಿತಿಯ ಸದಸ್ಯರನ್ನು ಜೊತೆಗೆ ಎಂಟು ಜನರ ಕಾರ್ಯಕಾರಿ ಸಮಿತಿಯನ್ನು ಆರಿಸಿದೆ.

* * *

ತುಮಕೂರು ಸಮುದಾಯ ಸರ್ವಸದಸ್ಯರ ಸಭೆ ನಡೆದಿದ್ದು ಅಧ್ಯಕ್ಷರಾಗಿ ಹೆಚ್. ಜಿ. ಸಣ್ಣಗುಂಡಯ್ಯ ಉಪಾಧ್ಯಕ್ಷರಾಗಿ ಶ್ರೀರಾಮರೆಡ್ಡಿ, ಕಾರ್ಯದರ್ಶಿಯಾಗಿ ಧೃವಕುಮಾರ್ ಹಾಗೂ ಖಜಾಂಚಿಯಾಗಿ ಸೂರ್ಯಪ್ರಕಾಶ ಇವರುಗಳನ್ನು ಪದಾಧಿಕಾರಿಗಳನ್ನಾಗಿ ಆರಿಸಲಾಯಿತು.

* * *

ಅಲ್ಲಿ ಬೆಲ್ಚಿ ನಾಟಕದ ಪ್ರದರ್ಶನವನ್ನು ಸುಮಾರು 24 ಬಾರಿ ಬೇರೆಬೇರೆ ಸ್ಥಳಗಳಲ್ಲಿ ಪ್ರದರ್ಶಿಸಿದ್ದಾರೆ. ತಾ॥ 23-2-82 ರಂದು ರಾಜ್ಯದಾದ್ಯಂತ ಸಮುದಾಯ ನಡೆಸಿದ ನಾಟಕೋತ್ಸವದ ಅಂಗವಾಗಿ 'ಕಾವ್ಯ ಕಿನ್ನರಿ' ಬೇಂದ್ರೆಯವರ ಕವನಗಳ ಗಾಯನ 'ಮಂಡೂಕ ರಾಜ್ಯ' ಎಂಬ ನಾಟಕದ ಕಾರ್ಯಕ್ರಮಗಳನ್ನು ಇತ್ತಿದೆ.

* * *

ಬೆಂಗಳೂರು ಸಮುದಾಯವು ತಾ॥ 14-4-82 ರಂದು ಸರ್ವಸದಸ್ಯರ ಸಭೆ ಸೇರಿದ್ದು ಹೊಸ ವರ್ಷಕ್ಕೆ ಪದಾಧಿಕಾರಿಗಳನ್ನು ಆರಿಸಿದೆ. ಅಧ್ಯಕ್ಷರಾಗಿ ಜಿ. ಕೆ. ಗೋವಿಂದರಾವ್, ಕಾರ್ಯದರ್ಶಿಯಾಗಿ, ಎಂ. ವಿ. ರವೀಂದ್ರ ಸಹಕಾರ್ಯದರ್ಶಿಯಾಗಿ ಮೋಹನಕುಮಾರ್, ಖಜಾಂಚಿ ಹುಮಾಯೂನ್ ಮತ್ತು ಕಾರ್ಯಕಾರಿ ಸಮಿತಿಯನ್ನು ಆರಿಸಿದೆ.

ಪ್ರಗತಿಪರ ವಿಚಾರಧಾರೆಗೆ ಓದಿ

ಪಂಚಮ

ಸಂಕ್ರಮಣ

ಶೂದ್ರ

ಅಂಕಣ

ರುಜುವಾತು

ಲಂಕೇಶ್ ಪತ್ರಿಕೆ

# 'ರಂಗಭೂಮಿ: ಜನರ ನೋವ ಮಿಡಿವ ಮಿತ್ರ'

—ಜನಾರ್ಧನ

ಕಲಾವಿದರೆಂದರೆ ಬರೀ ನಾಟಕ ಮಾಡುವುದೊಂದೇ ಅವರ ಕೆಲಸ ರಂಗ ಚಟುವಟಿಕೆ ಸಾಮಾನ್ಯ ಜನರ ಮಧ್ಯೆ ನಡೆಯದೆ ಕಲಾಕ್ಷೇತ್ರದಂತ ಕಡೆಯೇ ಅಂಟಿಕೊಂಡಿದೆ ಎಂಬಲವಾರು ಅಪವಾದಗಳು ಕಲಾವಿದರ ಮೇಲೆ ಆಗಾಗ ದಾಳಿ ಮಾಡುತ್ತಿದ್ದುವು (ಸತ್ಯಕೂಡ) ಆದರೆ ಇತ್ತೀಚೆಗೆ ಸಾಮಾನ್ಯ ಜನರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಂಥವರು ಕಲಾವಿದರು. 'ಗೋಕಾಕ್ ವರದಿ ಜಾರಿಗೆ ಬರಲಿ, ಕುರಿತಾದ ಹೋರಾಟ ಕರ್ನಾಟಕದಲ್ಲಿ ಪ್ರಾರಂಭವಾದ ಮೇಲೆ ಕಲಾವಿದರ ಒಳಗುಂದಿ ಒಡೆದು ಬೀದಿಗೆ ಬಂದದ್ದು ಅತ್ಯಂತ ಸ್ವಾಗತಾರ್ಹವಾದ ಸಂಗತಿ. ಅಸ್ತಿತ್ವದಲ್ಲಿದ್ದ ರಂಗಭೂಮಿ ಕ್ರಿಯಾ ಸಮಿತಿಗೆ ಹೆಚ್ಚು ಜೀವಕೊಟ್ಟು ಕಲಾಕ್ಷೇತ್ರದ ಮುಂಭಾಗ ಕನ್ನಡ ಹೋರಾಟದ ಅಂಗವಾಗಿ ಸತ್ಯಾಗ್ರಹ ಘೋಷಣೆ, ನಾಟಕ, ಹಾಡುಗಳು ಹೆಸರಾಂತ ಕಲಾವಿದರು, ಸಾಹಿತಿಗಳು, ಚಿತ್ರನಟರುಗಳಿಂದ ಭಾಷಣ ಇತ್ಯಾದಿ ಕಾರ್ಯಕ್ರಮಗಳ ಮೂಲಕ ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚು ಜನರು ಹೋರಾಟದಲ್ಲಿ ಭಾಗಿಗಳಾಗುವಂತೆ ಮಾಡುವುದರಲ್ಲಿ ಕಲಾವಿದರ ಕೈವಾಡ ಹೆಚ್ಚಿಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು ಏನೇ ಆದರೂ ಎಲ್ಲಾ ಕಲಾವಿದರು ತಮ್ಮ ಸುತ್ತುವರಿದಿದ್ದ ಗೆದ್ದಲು ತಿಂದ ಕೋಟೆ ಗೋಡೆಗಳನ್ನೊಡೆದು ಬೀದಿಗೆ ಬಂದಿದ್ದೆ ಆಶ್ಚರ್ಯ! (ಅನಿವಾರ್ಯ ಕೂಡಾ) ಈ ಸಂದರ್ಭದಲ್ಲಿ ಬೆಂಗಳೂರಿನ ಹಲವು ಅನೇಕ ಹವ್ಯಾಸಿ ನಾಟಕ ತಂಡಗಳು, ಕಲಾವಿದರು, ಸಾಹಿತಿಗಳು, ಚಿತ್ರನಟರು ಎಲ್ಲರೂ ಇದ್ದರೂ, ಕೆಲವರು 'ಈಗ ನಾವು ಹೋಗದಿದ್ದರೆ ನಾಳೆ ಏನು ಗತಿ ಎಂಬ ಭಯದಿಂದಲೇ ಬಂದು ಸೇರಿದರು ಕೆಲವರು ಬರಲೇ ಇಲ್ಲ, ಇನ್ನೊಬ್ಬರನ್ನು ರಂಗದ ಮೇಲೆ ಕುಣಿಯುವ ಜನ' ಎಂದು ಹೇಳಿಕೊಂಡು ಒಡಾಡುವ ಮಹಾ ಬುದ್ಧಿವಂತರು ಬರೀ ಪತ್ರಿಕೆಗಳಲ್ಲೆ ಕುಣಿದದ್ದೂ ಉಂಟು, ಅಂತೂ ಕಲಾವಿದರೆಲ್ಲ ಬೀದಿಗೆ ಸೀದ ಬಂದದ್ದು ರಾಜ್ಯಾದ್ಯಂತ ನಡೆಯುತ್ತಿದ್ದ ಚಳವಳಿಗೆ ದೊಡ್ಡ ಸ್ಫೂರ್ತಿ ತಂದಿತ್ತು. ರಂಗಭೂಮಿ ಜನರ ನೋವ ಮಿಡಿವ ಮಿತ್ರ" ಎಂಬ ಘೋಷಣೆಯೊಟ್ಟಿಗೆ ಜನರ ಮಧ್ಯೆ ನೀಳ ಸಂಪರ್ಕದೊಂದಿಗೆ ಹೀಗೇ ಮುಂದುವರಿಯಲೆಂದು ಆಶಿಸೋಣವೆ,

....... ............

# ಪ್ರಿಂಟರ್ಸ್ ಪ್ರಕಾಶನ

**16, ಮಹಾತ್ಮಗಾಂಧಿ ರಸ್ತೆ, ಬೆಂಗಳೂರು–560 001**

ಕನ್ನಡದಲ್ಲಿ ಉತ್ತಮ ಹಳೆಯ-ಹೊಸ ಲೇಖಕರ ಕಥೆ, ಕಾದಂಬರಿ, ನಾಟಕ, ಮಕ್ಕಳ ಸಾಹಿತ್ಯ, ವಿಚಾರ ಸಾಹಿತ್ಯ. ಬೇರೆ ಭಾಷೆಗಳ ಅನುವಾದಿತ ಕೃತಿಗಳು, ವಿಜ್ಞಾನ, ಮಾನವಿಕಶಾಸ್ತ್ರ, ಇತ್ಯಾದಿ ಪುಸ್ತಕಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ಕೊಡುವ ಹೊಸ ಪ್ರಕಾಶನ ಸಂಸ್ಥೆ.

ಮೊದಲ ಪ್ರಕಟಣೆಗಳು ಸದ್ಯದಲ್ಲೇ ಮಾರುಕಟ್ಟೆಗೆ ಬರಲಿವೆ.

ಮಾಲೀಕರು:

ದಿ ಪ್ರಿಂಟರ್ಸ್ (ಮೈಸೂರು) ಲಿಮಿಟೆಡ್.,